ಬಿ. ಎಲ್. ಸಿ. ರಾಜನ್

# ಶಿಲ್ಪಿಯ ಪಾತ್ರ

## (ಸ್ವಾಸ್ಥ್ಯ ಪರಿಪಾಲನ)



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು
೧೯೭೧

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ—೬೯

# ಶಿಲ್ಪಿಯ ಪಾತ್ರ

## (ಸ್ವಾಸ್ಥ್ಯ ಪರಿಪಾಲನ)

ಬಿ. ಎಲ್. ಸಿ. ರಾಜನ್
ಬಿ. ಇ. (ಸಿವಿಲ್), ಎಂ. ಇ. ಪಿ. ಎಚ್.
ಡಿ. ಪಿ. ಎಚ್. ಇ. (ಯು. ಕೆ.) ಎ. ಎಮ್. ಐ. ಇ. (ಇಂಡಿಯಾ)



ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೬೧

ಮೊದಲನೆಯ ಮುದ್ರಣ : ೧೯೫೮
೩೦೦೦ ಪ್ರತಿಗಳು
ಎರಡನೆಯ ಮುದ್ರಣ : ೧೯೭೧
೫೦೦೦ ಪ್ರತಿಗಳು

ಬೆಲೆ : ೨೫ ಪೈಸೆ

ಪ್ರಕಾಶಕರು
ಡೈರಕ್ಟರ್ 'ಪ್ರಸಾರಾಂಗ
ಮಾನಸಗಂಗೊತ್ರಿ, ಮೈಸೂರು–೬

ಮುದ್ರಕರು
ಶ್ವೇತಾದ್ರಿ ಪ್ರಿಂಟರ್ಸ್
ಸೀತಾವಿಲಾಸ ಅಗ್ರಹಾರ, ಮೈಸೂರು–೧

# ಪ್ರಸ್ತಾವನೆ

ಈ ಕಿರು ಪುಸ್ತಕದ ವಿಷಯವು, ಎಲ್ಲರೂ ತಮ್ಮ ತಮ್ಮ ಆರೋಗ್ಯ ಚಿಂತನೆಯಲ್ಲಿ ತೊಡಗಿರುವುದರಿಂದ, ಅವಶ್ಯವಾಗಿ ತಿಳಿದುಕೊಂಡು ಅನುಸರಿಸಬೇಕಾದದ್ದು. ಜನರು ತಮ್ಮ ಉತ್ತಮ ಜೀವನಕ್ಕೆ ಮುನಿಸಿಪಾಲಿಟಿಗಳನ್ನು, ಸರ್ಕಾರಗಳನ್ನು ಒತ್ತಾಯ ಮಾಡಬೇಕಾದುದೇ ಆದರೂ, ನಾವು ಪ್ರಪಂಚದಲ್ಲಿ ಪ್ರವೀಣರು ಒಪ್ಪಿಕೊಂಡಿರುವುದನ್ನು ಅನುಸರಿಸಲು ಸಿದ್ಧರಿಲ್ಲ. ಏಕೆಂದರೆ ತಲೆತಲಾಂತರಗಳಿಂದಲೂ ನಾವು ಒಂದು ಮಾದರಿಯ ಜೀವನಕ್ಕೆ ಕಟ್ಟುಬಿದ್ದಿದ್ದೇವೆ. ಅದನ್ನು ಬಿಟ್ಟು ಬೇರೊಂದು ನೂತನ ಜೀವನವನ್ನು ಅನುಸರಿಸಲು ನಮ್ಮ ಜನರಲ್ಲಿರುವ ಹೃದಯ ದೌರ್ಬಲ್ಯಗಳು ಮತ್ತು ಅಜ್ಞಾನಗಳು ಅಡ್ಡಿಪಡಿಸುತ್ತವೆ. ವಿಷಯದ ವಿಸ್ತಾರ ಬಹಳ. ಹನ್ನೊಂದು ಭಾಗವಾಗಿ ವಿಂಗಡಿಸಿರುವ ವಸ್ತುವನ್ನು ಹನ್ನೊಂದು ದೊಡ್ಡ ಪುಸ್ತಕಗಳಾಗಿ ಬರೆಯಬಹುದು. ಆದರೆ ಆ ರೀತಿಯ ವಿಶೇಷವಾದ ಜ್ಞಾನವು ಅದರಲ್ಲಿ ಅಭಿರುಚಿಯುಳ್ಳವರು ತಿಳಿಯಲು ಸಾಧ್ಯವೇ ಹೊರತು, ಸಾಮಾನ್ಯ ಜನರಿಗಾಗಿ ರಚಿತವಾಗಿರುವ ಈ ಕಿರು ಹೊತ್ತಗೆಯಲ್ಲಲ್ಲ. ಈ ದೃಷ್ಟಿಯನ್ನು ಅನುಸರಿಸಿ ನಾನು ಸಾಮಾನ್ಯ ವಿಷಯವನ್ನು ಮಾತ್ರ, ತಿಳಿದ ಮಟ್ಟಿಗೆ ಕನ್ನಡದಲ್ಲಿ ಬರೆಯಲು ಮೊದಲನೇ ಪ್ರಯತ್ನ ಮಾಡಿದ್ದೇನೆ. ತಪ್ಪುಗಳಿದ್ದಲ್ಲಿ ದಯವಿಟ್ಟು ಓದುಗರು ತಿದ್ದಬೇಕಾಗಿ ಬೇಡಿಕೊಳ್ಳುತ್ತೇನೆ.

" ಜನಸೇವೆಯೇ ಜನಾರ್ದನಸೇವೆ " ಎಂಬುದು ಈಗ ನಮ್ಮ ದೇಶದ ಎಲ್ಲಾ ಜನರ ಮಂತ್ರವಾಗಿದೆ. ಈ ಸೇವೆಗಳಲ್ಲಿ ಜನರ ಆರೋಗ್ಯವನ್ನು ಸುಧಾರಿಸುವುದು ಒಂದು ದೊಡ್ಡ ಸೇವೆಯೆಂದು ಭಾವಿಸಿರುತ್ತೇನೆ. ಆರೋಗ್ಯವನ್ನು ಸುಧಾರಿಸಬೇಕಾದರೆ ಬರಿ ವೈದ್ಯರಿಂದಲೇ ಸಾಧ್ಯವಿಲ್ಲವೆಂದು ಸಿದ್ಧಾಂತವಾಗಿದೆ. ಇದ ಕ್ಕೋಸ್ಕರ ಇಂಜನೀಯರ್ ಅಥವಾ ಶಿಲ್ಪಿಯ ಸಹಕಾರವು ಅವ ಶ್ಯಕವೆಂದು ಭಾವಿಸಿದ್ದಾರೆ. ಆದರೆ ಅನಾರೋಗ್ಯವನ್ನು ತರುವ ಶಕ್ತಿಗಳ ಜ್ಞಾನವೇ ಇಲ್ಲದ ಮತ್ತು ಜನಾರೋಗ್ಯ ಕಾಮಗಾರಿ ಯಲ್ಲಿ ವಿಶೇಷವಾದ ಜ್ಞಾನ ಮತ್ತು ತರಪೇತು ಇಲ್ಲದ ಇಂಜನೀ ಯರ್ ಅಥವಾ ಶಿಲ್ಪಿಯ ದೆಸೆಯಿಂದ ಜನಾರೋಗ್ಯಕ್ಕೆ ಅನಾ ಹುತಗಳಾಗಿರುವ ನಿದರ್ಶನಗಳಿವೆ. ಆದುದರಿಂದ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯು ಸಾರ್ವಜನಿಕ ಆರೋಗ್ಯದಲ್ಲಿ ಅಭಿನಯಿಸಬೇಕಾದ ಪಾತ್ರವಿವರಣೆಯನ್ನು ಈ ಪುಸ್ತಕದಲ್ಲಿ ಸೂಕ್ಷ್ಮವಾಗಿ ನಿರೂಪಿಸಿದ್ದೇನೆ.

ಈ ಕೃತಿಯನ್ನು ರಚಿಸಲು ಇಂಡಿಯಾ ಸರ್ಕಾರದವರ ಕಮಿಟಿ ರಿಪೋರ್ಟುಗಳು, ಪ್ರಕಟಣೆಗಳು ಮೊದಲಾದುವನ್ನು ಧಾರಾಳ ವಾಗಿ ಉಪಯೋಗಿಸಿಕೊಂಡಿದ್ದೇನೆ. ಇವುಗಳ ಲೇಖಕರಿಗೆ ನಾನು ಋಣಿ. ಇದರ ಮೂಲ ಪ್ರತಿಗಳನ್ನೋದಿ ನೋಡಿ ಉತ್ತಮ ಸಲಹೆಗಳನ್ನಿತ್ತ ಮಹನೀಯರೆಲ್ಲರಿಗೂ ನನ್ನ ವಂದನೆಗಳು. ಅದ ರಲ್ಲಿಯೂ ಸರ್ಕಾರಿ ಇಂಜನೀಯರಿಂಗ್ ಕಾಲೇಜಿನ ಸಿವಿಲ್ ಇಂಜನೀಯರಿಂಗ್ ಶಾಖೆಯ ಪ್ರೊಫೆಸರ್ ಪ್ರಾಧ್ಯಾಪಕರಾದ ಡಿ. ಬಿ. ನರ ಸಿಂಹಯ್ಯ, ಬಿ. ಇ.,ಎಂ.ಎಸ್. (ಸಿ. ಇ) ಎಂ.ಎಸ್. (ಮೆಕಾ ನಿಕ್ಸ್ ) (ಐ.ಐ.ಟಿ.,ಯು.ಎಸ್.ಎ.)ಅವರಿಗೆ ನಾನು ಚಿರಋಣಿ.

ಈ ಕಿರುಹೊತ್ತಗೆಯನ್ನು ರಚಿಸುವಂತೆ ಪ್ರೋತ್ಸಾಹವಿತ್ತ ವಿಶ್ವ ವಿಧ್ಯಾನಿಲಯದ ಅಧಿಕಾರಿಗಳಿಗೂ, ತನ್ಮೂಲಕ ವಿಶ್ವವಿಧ್ಯಾನಿಲ ಯದವರಿಗೂ ನಾನು ಕೃತಜ್ಞತೆಯನ್ನು ಸೂಚಿಸುತ್ತೇನೆ.

**ಬಿ. ಎಲ್. ಸಿ. ರಾಜನ್**

## ಎರಡನೆಯ ಮುದ್ರಣದ ಪ್ರಸ್ತಾವನೆ

ಈ ನನ್ನ ಚಿಕ್ಕ ಕೃತಿಯು ಎರಡನೆಯ ಮುದ್ರಣವನ್ನು ಕಾಣು ತ್ತಿರುವುದು ಬಹಳ ಸಂತೋಷಕರವಾದ ವಿಚಾರ. ಹೆಚ್ಚಿನ ಪರಿಸ್ಕರಣದ ಗೋಜಿಗೆ ಹೋಗದೆ ಅಲ್ಲಲ್ಲಿ ಇದ್ದ ಮುದ್ರಣ ದೋಷಗಳನ್ನು ತಿದ್ದಲೂ ಮತ್ತು ಈಗಿನ ಸೆಂಟಿಮೀಟರ್ ಗ್ರಾಮ್‌ಗಳನ್ನು ಸೂಚಿಸಲು ಪ್ರಯತ್ನಪಟ್ಟಿರುತ್ತೇನೆ. ಈ ಮೂಲಕ ಓದುಗರಿಗೂ ಮತ್ತು ಎರಡನೆಯ ಮುದ್ರಣಕ್ಕೆ ಕಾರ ಣರಾದ ಮೈಸೂರು ವಿಶ್ವವಿದ್ಯಾಲಯ ಪ್ರಸಾರಾಂಗದ ಅಧಿಕಾರಿ ಗಳಿಗೂ ನಾನು ಕೃತಜ್ಞತೆಯನ್ನು ಸೂಚಿಸುತ್ತೇನೆ.

ಬೆಂಗಳೂರು **ಬಿ. ಎಲ್. ಸಿ. ರಾಜನ್**
5-10-1970

## ವಿಷಯಾನುಕ್ರಮಣಿಕೆ

# ಶಿಲ್ಪಿಯ ಪಾತ್ರ

## ೧. ನಮ್ಮ ಮುಂದಿರುವ ಸಮಸ್ಯೆಗಳು

ಕಾಯಿಲೆಗಳನ್ನು ನಿರೋಧಿಸಿ ಜನರು ಆರೋಗ್ಯವಂತರಾಗಿರುವುದು ಅವರು ಎಂತಹ ವಾತಾವರಣದಲ್ಲಿ ಹುಟ್ಟಿದ್ದಾರೆ, ಬೆಳೆದಿದ್ದಾರೆ, ವಿದ್ಯಾಭ್ಯಾಸವನ್ನು ಪಡೆದಿದ್ದಾರೆ, ದೇಹ ಪೋಷಣೆಗಾಗಿ ಎಂತಹ ಆಹಾರ ಮತ್ತು ಪಾನೀಯಗಳನ್ನು ಉಪಯೋಗಿಸಿದ್ದಾರೆ, ಅವರ ಸಂಚಾರ, ಕೆಲಸ ಮತ್ತು ವಿಶ್ರಾಂತಿಯು ಯಾವ ರೀತಿಯದಾಗಿದೆ ಎಂಬುದನ್ನು ಅವಲಂಬಿಸಿರುತ್ತದೆ. ವೈದ್ಯಕೀಯ ರೀತಿಯಲ್ಲಿ, ಕಾಯಿಲೆಗಳ ನಿವಾರಣೆಗಾಗಿ ಈಗಿನ ಆಧುನಿಕ ವಿಜ್ಞಾನ ಪೆನಿಸಿಲಿನ್, ಸ್ಟ್ರೆಪ್ಟೊಮೈಸಿನ್ ಮೊದಲಾದ ಅನೇಕ ಸಿದ್ಧೌಷಧಗಳನ್ನು ದಯಪಾಲಿಸಿದ್ದರೂ, ನಾವು ಇರುವ ವಾತಾವರಣ, ತಿನ್ನುವ ಆಹಾರ ಮತ್ತು ಕುಡಿಯುವ ನೀರು ಇವುಗಳ ಮೇಲೆ ನಮ್ಮ ಆರೋಗ್ಯವು ಬಹಳ ಮಟ್ಟಿಗೆ ಅವಲಂಬಿಸಿರುತ್ತದೆಯೆಂದು ಧಾರಾಳವಾಗಿ ಹೇಳಬಹುದು.

ಕಾಲರಾ, ಟೈಫಾಯಿಡ್, ಪ್ಲೇಗು ಮೊದಲಾದ ಸಾಂಕ್ರಾಮಿಕ ರೋಗಗಳು ಬಂದಾಗ ಆರೋಗ್ಯ ಇಲಾಖೆಯವರು ಸಾಮೂಹಿಕ ದೇವಿ ಹಾಕಿಸುವುದರಿಂದ ನಿರೋಧಿಸಬಹುದು. ಆದರೆ ಅಂತಹ ಕಾಯಿಲೆಗಳು ಆಗಿಂದಾಗ್ಗೆ ತಲೆದೋರದಂತೆ ಮಾಡಬೇಕಾದರೆ ಕೆಲವು ನಿಯಮಗಳನ್ನು ಅನುಸರಿಸಬೇಕು.

ಕುಡಿಯುವ ನೀರು ಶುದ್ಧವಾಗಿರಬೇಕು; ಜನರು ವಿಸರ್ಜಿಸಿದ ಮಲಮೂತ್ರಗಳನ್ನು ಅಚ್ಚುಕಟ್ಟಾದ ಮತ್ತು ಅಸಹ್ಯವಿಲ್ಲದ ರೀತಿಯಲ್ಲಿ ಶೇಖರಿಸಿ, ದೂರವಾಗಿ ಸಾಗಿಸಬೇಕು; ಆಹಾರ ಪಾನೀಯಗಳನ್ನು ಶುದ್ಧವಾದ, ಆರೋಗ್ಯನಿಯಮಗಳಿಗೆ ತಕ್ಕಂಥ ಮಾದರಿಯಲ್ಲಿ ತಯಾರಿಸಿ, ಶೇಖರಿಸಿ, ಉಪಯೋಗಿಸಬೇಕು; ಅಲ್ಲದೆ ಅವುಗಳಮೇಲೆ ಸಾಂಕ್ರಾಮಿಕ ರೋಗಗಳನ್ನು ಹರಡಲು ಕಾರಣವಾದ ನೊಣ ಮೊದಲಾದವುಗಳು ಕೂಡದಂತೆ ನೋಡಿ ಕೊಳ್ಳಬೇಕು ಮತ್ತು ಅವುಗಳ ಉತ್ಪತ್ತಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಕಡಮೆ ಮಾಡುವ ವಿಧಾನಗಳನ್ನು ಅನುಸರಿಸಬೇಕು; ಇಲಿಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಮನುಷ್ಯರ ಸಂಪರ್ಕ ದಿಂದ ದೂರವಿರುವಂತೆ ಮಾಡಬೇಕು.

ಮೇಲ್ಕಂಡಂತೆಯೇ ಕ್ಷಯ ಮೊದಲಾದ ಅಂಟುರೋಗಗಳನ್ನು ಸಂಪೂರ್ಣವಾಗಿ ತಡೆಯಬೇಕಾದರೆ ತಕ್ಕಮಟ್ಟಿಗೆ ಗಾಳಿ ಬೆಳಕು ಗಳು ಇರುವಮನೆಯು ಬಹಳ ಆವಶ್ಯಕವೆಂಬುದನ್ನು ಮರೆಯಲಾ ಗದು. ಸೊಳ್ಳೆಗಳಿಂದ ಬರುವ ಕಾಯಿಲೆಗಳಾದ ಮಲೇರಿಯಾ, ಫೈಲೇರಿಯಾ ಮೊದಲಾದ ಕಾಯಿಲೆಗಳನ್ನು ನಿರೋಧಿಸಬೇ ಕಾದರೆ, ನಮ್ಮ ಮನೆಗಳ ಒಳಗಿನ, ಹೊರಗಿನ ಮತ್ತು ಸುತ್ತು ಮುತ್ತಲಿನ ಶುಚಿತ್ವವು ಬಹಳ ಆವಶ್ಯಕವೆಂಬುದನ್ನು ನಾವು ಮರೆ ಯುವಂತೆಯೇ ಇಲ್ಲ.

ಜಗತ್ತಿನ ಎಲ್ಲಾ ಆಧುನಿಕ ರಾಜ್ಯಗಳಲ್ಲಿ ಈ ಮೇಲ್ಕಂಡ ಸಾರ್ವ ಜನಿಕ ಜನೋಪಕಾರಿ ಆವಶ್ಯಕತೆಗಳನ್ನು ಜನರಿಗೆ ಒದಗಿಸಿ ಕೊಡುವ ಕಾರ್ಯಭಾರವನ್ನು ಜನಾರೋಗ್ಯ ಇಂಜನೀಯರ್ ಶಿಲ್ಪಿಯ ವಶಕ್ಕೆ ಕೊಟ್ಟಿದೆ. ಈ ಜನಾರೋಗ್ಯ ಇಂಜನೀಯರ್

ಶಿಲ್ಪಿಯಿಂದ ನಡೆಯುವ ಕಾರ್ಯಗಳ ಫಲಪ್ರಾಪ್ತಿಯು ನಿಧಾನವಾದರೂ, ತಕ್ಕಮಟ್ಟಿಗೆ ಶಾಶ್ವತವಾದದ್ದು.

ಉತ್ತಮ ಮಟ್ಟದ ಜನಜೀವನಕ್ಕೆ ಬೇಕಾದ ಕೆಲವು ಬಹು ಮುಖ್ಯವಾದ ಆವಶ್ಯಕತೆಗಳು ಯಾವುವೆಂಬುದನ್ನು ಈ ಮುಂದೆ ಗಮನಿಸೋಣ:—

(೧) ಮನೆ ಮತ್ತು ಮನೆಯ ಸುತ್ತಮುತ್ತಲಿನ ವಾತಾವರಣವು, ಪ್ರತಿ ಸಂಸಾರಿಕನ ಕುಟುಂಬಕ್ಕೆ ಬಿಸಿಲಿನ ಜಳ, ಚಳಿಗಾಳಿ, ಮಳೆ ಮತ್ತು ಸೂರ್ಯ ರಶ್ಮಿಯ ವಿರುದ್ಧವಾಗಿ ನೆರಳು ಕೊಡುವ ನೆಲೆಯೂಗಿರಬೇಕು; ಪ್ರಜೆ ಮತ್ತು ಆ ಪ್ರಜೆಯ ಸ್ವಂತ ಆಸ್ತಿ ಪಾಸ್ತಿಗಳನ್ನು ಸುರಕ್ಷಿತವಾಗಿ ಕಾಪಾಡುವಂತಹ ಸ್ಥಳವಾಗಿರಬೇಕು; ಮನೆಯು ಅಚ್ಚುಕಟ್ಟಾಗಿಯೂ, ಮನೆಯ ಜನಗಳಿಗೆ ಮತ್ತು ಸಾಮಾನುಗಳಿಗೆ ಗುಪ್ತ ಮತ್ತು ಸುರಕ್ಷಿತ ಸ್ಥಳವಾಗಿಯೂ ಇರಬೇಕು. ಮನೆಯಲ್ಲಿ ವಾಸಿಸುವ ಜನರಿಗೆ ಅಕ್ಕಪಕ್ಕದ ಜನರ ಸಹವಾಸವು ಲಭಿಸುವಂತೆಯೂ ಸುಂದರವಾಗಿಯೂ ಸಾಂಕ್ರಾಮಿಕ ರೋಗಗಳು ಹರಡುವುದಕ್ಕೆ ಅವಕಾಶವಿಲ್ಲದಂತೆಯೂ ವಾಸದಮನೆಯ ಯೋಜನೆಇರಬೇಕು.

(೨) ಜನರಿಗೆ ಶುದ್ಧವಾದ, ಆರೋಗ್ಯಕರವಾದ ಮತ್ತು ಒಳ್ಳೆಯ ತಂಪಾದ ಜಲವು ಕುಡಿಯುವುದಕ್ಕೂ ಅಡಿಗೆ ಮೊದಲಾದ ಕಾರ್ಯಗಳಿಗೂ ಮತ್ತು ಸ್ನಾನ ಮೊದಲಾದ ಶುಚಿತ್ವದ ಕಾರ್ಯಗಳಿಗೂ ಬಹಳ ಆವಶ್ಯಕರವಾದುದು. ಇದು ಸಿದ್ಧಿಸಬೇಕಾದರೆ ಸರಿಯಾದ ನೀರು ಸರಬರಾಜು ವ್ಯವಸ್ಥೆ ಇರಬೇಕು.

(೩) ಜನರಿಗೆ ಸಾಕಷ್ಟು, ಪುಷ್ಟಿಕರವಾದ ಆಹಾರ, ಹಾಲು

ಮತ್ತು ಇತರೇ ಪಾನೀಯಗಳನ್ನು ಶುದ್ಧವಾದರೀತಿಯಲ್ಲಿ ತಯಾರಿಸಿ, ಶೇಖರಿಸಿ, ಹಂಚುವಂತಿರಬೇಕು. ತಿಂಡಿತೀರ್ಥಗಳನ್ನು ಮಾಡುವ ಸ್ಥಳಗಳು, ಅಂದರೆ ಮಾರುಕಟ್ಟೆಗಳು, ಮಾಂಸದಂಗಡಿಗಳು, ಕ್ಯಾಂಟೀನುಗಳು, ಹೋಟೆಲುಗಳು, ಡೈರಿ ಮೊದಲಾದುವುಗಳು ಶುಚಿಯಾಗಿಯೂ ಮತ್ತು ಶುಚಿತ್ವವನ್ನು ಕಾಪಾಡುವಂತೆಯೂ ಇರಬೇಕು.

(೪) ಜನರ ಜೀವನ ಮತ್ತು ಅವರ ಕೆಲಸ ಕಾರ್ಯಗಳು ಉತ್ತಮವಾದ ಮತ್ತು ಆರೋಗ್ಯಕರವಾದ ವಾತಾವರಣದಲ್ಲಿ ನಡೆಯಬೇಕು. ಅಂತಹ ವಾತಾವರಣವು ಕೆಲಸಗಾರರಿಗೆ ಯಾವ ವಿಧವಾದ ಕಾಯಿಲೆಗಳನ್ನು ತರದಂತೆಯೂ, ಆದಷ್ಟು ಮಟ್ಟಿಗೆ ಶುಚಿಯಾಗಿಯೂ, ಅಪಾಯ ರಹಿತವಾಗಿಯೂ ಮತ್ತು ಉತ್ಸಾಹವನ್ನು ಹುಟ್ಟಿಸುವಂತೆಯೂ ಇರಬೇಕು. ಈ ರೀತಿಯಾದ ವಾತಾವರಣವು ದೊರೆಯಬೇಕಾದರೆ ಕೆಲಸಗಾರರು ಉಸಿರಾಡುವ ಗಾಳಿಯಲ್ಲಿ ಯಾವ ವಿಧವಾದ ಕೆಟ್ಟ ಹೊಗೆಯಾಗಲಿ, ಅನಿಲವಾಗಲಿ, ಧೂಳಾಗಲಿ, ರುಚಿಯಾಗಲಿ, ಕ್ರಿಮಿ ಮೊದಲಾದ ಅಪಾಯಕಾರಕ ವಸ್ತುಗಳಾಗಲಿ ಇರಬಾರದು. ಕೆಲಸಮಾಡುವ ಸ್ಥಳದಲ್ಲಿ ಸಾಧ್ಯವಾದಷ್ಟು ಶಾಂತಿ, ಸಮಾಧಾನಗಳು, ಗಾಳಿ ಬೆಳಕುಗಳು ಇದ್ದು ಕೆಲಸಗಾರು ಉತ್ತಮ ರೀತಿಯಲ್ಲಿ ಅವರವರ ಕೆಲಸಕಾರ್ಯಗಳನ್ನು ನಿರ್ವಹಿಸುವಂತಿರಬೇಕು. ಈ ರೀತಿಯಾಗಬೇಕಾದರೆ ಅಪಾಯಕಾರಿ ಮತ್ತು ದುಷ್ಪರಿಣಾಮಕಾರಿಯಾದ ಕೈಗಾರಿಕೆಗಳನ್ನು ಕಾನೂನಿನ ಪ್ರಕಾರ, ಕೈಗಾರಿಕ ಸ್ಥಳಗಳ ಶುಚಿತ್ವವನ್ನು ಅನುಸರಿಸಿ ನಿರ್ಮಿಸಬೇಕು.

(೫) ಮನೆಗಳಿಂದ, ಜನರಿಂದ, ಕಾರ್ಖಾನೆ ಮೊದಲಾದವು

ಗಳಿಂದ ವಿಸರ್ಜಿಸಲ್ಪಟ್ಟ ವಸ್ತುಗಳನ್ನು ಆರೋಗ್ಯ ನಿಯಮಗಳನ್ನು ಅನುಸರಿಸಿ ಶೇಖರಿಸಿ, ಸಾಗಿಸಿ, ಜನರಿಗೆ ಅನಾರೋಗ್ಯವುಂಟಾಗ ದಂತೆ ವಿಸರ್ಜಿಸಬೇಕು. ಕಾರ್ಖಾನೆಗಳು ವಿಸರ್ಜಿಸುವ ಅಪಾಯಕಾರಿ ವಸ್ತುಗಳು ಸಾರ್ವಜನಿಕ ಮಲಮೂತ್ರಗಳನ್ನು ಒಯ್ಯುವ ಪೈಪುಗಳನ್ನು ಸೇರುವ ಮುನ್ನ ತಕ್ಕ ಶುದ್ಧೀಕರಣವನ್ನು ಹೊಂದಿರತಕ್ಕದ್ದು. ಮಲಮೂತ್ರಗಳನ್ನು ಸಾಧ್ಯವಾದ ಕಡೆಗಳಲ್ಲಿ ಭೂಮಟ್ಟದಿಂದ ಕೆಳಗಿರುವ ಪೈಪುಗಳಲ್ಲಿ ಒಳಚರಂಡಿಯ ಮೂಲಕ ಆರೋಗ್ಯ ನಿಯಮಗಳನ್ನು ಅನುಸರಿಸಿ ಶೇಖರಣೆಮಾಡಿ, ಸಾಗಿಸಿ ವಿಸರ್ಜಿಸಬೇಕು. ಮಲಮೂತ್ರಗಳಿಂದ ಕೂಡಿದ ನೀರನ್ನು ನೀರಿಗೋ ಅಥವಾ ಭೂಮಿಯಮೇಲೋ ವಿಸರ್ಜಿಸುವಮೊದಲು, ಅದರಿಂದ ಜನರಿಗೆ ಅನಾರೋಗ್ಯವಾಗದಂತೆ, ಅಸಹ್ಯವಾಗದಂತೆ, ತಕ್ಕ ಶುದ್ಧೀಕರಣವನ್ನು ನಡಸತಕ್ಕದ್ದು. ಇದರಿಂದ ನದಿ, ಸರೋವರ, ಸಮುದ್ರತೀರ ಮೊದಲಾದವುಗಳ ಶುಚಿತ್ವ, ಸುಂದರತೆ ಮೊದಲಾದವುಗಳನ್ನು ಕಾಪಾಡಿದಂತೆ ಆಗುತ್ತದೆ.

(೬) ಅಂಟುರೋಗಗಳು ಒಬ್ಬರಿಂದೊಬ್ಬರಿಗೆ ವ್ಯಾಪಿಸಬೇಕಾದರೆ ಜನರು ವಿಶೇಷವಾಗಿ ಸೇರುವ ಸ್ಥಳಗಳಾದ ಪಾಠಶಾಲೆಗಳು, ಜಾತ್ರೆಗಳು, ಹಬ್ಬಗಳು, ನಾಟಕ, ಸಂಗೀತ ಮತ್ತು ಸಿನೆಮಾ ಮಂದಿರಗಳು, ಬಸ್ಸುಗಳು, ರೈಲುಗಳು ಮೊದಲಾದುವೇ ಕಾರಣ. ಆದುದರಿಂದ ಅವುಗಳ ನಿರ್ಮಾಣ ಮತ್ತು ಉಸ್ತುವಾರಿಯಲ್ಲಿ ಶುಚಿತ್ವವನ್ನು ಮುಖ್ಯವಾಗಿ ಗಮನಿಸಬೇಕು.

(೭) ಜನಜೀವನದ ವಾತಾವರಣವು ಸಾಂಕ್ರಾಮಿಕ ಮತ್ತು ಅಂಟುರೋಗಗಳನ್ನು ತರುವ ಬೀಜವಾಹನಿಗಳು ಬೆಳೆಯುವು

ದಕ್ಕೆ ಅವಕಾಶ ಕೊಡದಂತಿರಬೇಕು. ಆದುದರಿಂದ ನಮ್ಮ ಸುತ್ತ ಮುತ್ತಲಿನ ಸ್ಥಳವು ಶುಚಿತ್ವವನ್ನು ಕಾಪಾಡಲು ಸಹಾಯಕ ವಾಗಿರಬೇಕು. ಸೂರ್ಯನ ಬೆಳಕು ಧಾರಾಳವಾಗಿ ಬರುವಂತೆ ಮತ್ತು ತೇವವಾಗದಂತೆ ಅನುಸರಿಸುವ ಕ್ರಮಗಳಿಂದ ರೋಗ ತರುವ ಬೀಜವಾಹಕಗಳ ನಾಶಕ್ಕೆ ತಕ್ಕಷ್ಟು ಸಹಾಯವಾಗುತ್ತದೆ. ಇಲಿ, ನೊಣ, ಹೇನು, ಕೂರೆ, ಮರಳಿನ ನೊಣ, ಸೊಳ್ಳೆ ಮೊದಲಾದವುಗಳ ಬೆಳವಣಿಗೆಗೆ ನಾವು ರಚಿಸುವ ವಾತವರಣವು ವಿರುದ್ಧವಾಗಿರಬೇಕು.

(೮) ಮನುಷ್ಯನು ಕಾಯಿಲೆ ಬಿದ್ದ ಸಮಯದಲ್ಲಿ ಅವನನ್ನು ಗುಣಮುಖನನ್ನಾಗಿಸುವ ಸ್ಥಳವು ಆತನು ಆದಷ್ಟು ಬೇಗ ಗುಣ ಮುಖನಾಗುವುದಕ್ಕೆ ಸಹಾಯಕಾರಿಯಾಗಿರಬೇಕು. ಇದು ಕೆಲ ಮಟ್ಟಿಗೆ ಆಸ್ಪತ್ರೆಗಳ, ಸ್ಯಾನಿಟೋರಿಯಂಗಳ, ನರ್ಸಿಂಗ್ ಹೋಮ್‌ಗಳ ನಿರ್ಮಾಣವನ್ನು ಅವಲಂಬಿಸಿದೆ.

ಈ ಮೇಲ್ಕಂಡ ಎಂಟು ಸಾರ್ವಜನಿಕ ಸೌಕರ್ಯಗಳನ್ನು ಒದಗಿಸುವ ಸಮಸ್ಯೆಗಳು ನಮ್ಮ ಮುಂದಿವೆ. ಅವುಗಳನ್ನು ಗಮನಿಸಿ ಒದಗಿಸುವ ಕಾರ್ಯವು ಸರ್ಕಾರಕ್ಕೆ ಸೇರಿದ್ದು. ಈ ಸೌಕರ್ಯಗಳನ್ನು ಪ್ರಪಂಚದಲ್ಲಿ ಯಾವ ದೇಶವೂ ಪೂರ್ತಿಯಾಗಿ, ಶೇಕಡ ನೂರು ಭಾಗ ತೃಪ್ತಿಕರವಾಗಿ ಒದಗಿಸಿಲ್ಲ. ಆದರೆ ಪ್ರತಿಯೊಂದು ದೇಶವೂ ಈ ಸೌಕರ್ಯಗಳನ್ನು ಒದಗಿಸಲು ತನ್ನ ಶಕ್ತಿ ಮೀರಿ ಪ್ರಯತ್ನ ಪಡುತ್ತಿದೆ. ಇಂಡಿಯಾದೇಶವು ಈ ಸೌಕರ್ಯಗಳನ್ನು ಜನರಿಗೆ ನೀಡುವ ವಿಷಯದಲ್ಲಿ, ಪ್ರಪಂಚದ ಬೇರೆ ದೇಶಗಳಿಗಿಂತ ಬಹಳ ಹಿಂದುಳಿದಿದೆ. ಈ ಮೇಲ್ಕಂಡ ಸೌಕರ್ಯಗಳನ್ನು ಜನರಿಗೆ ತೃಪ್ತಿಕರವಾಗಿ ಒದಗಿಸಿಕೊಡಬೇಕಾದರೆ ಜನಾರೋಗ್ಯ ಇಂಜನೀ

ಯರ್ ಶಿಲ್ಪಿಯ ನೆರವು ಅಗತ್ಯವಾಗಿ ಬೇಕು. ಈತನು ಬಹು ಮುಖ್ಯವಾದ ಮೇಲ್ಕಂಡ ಸಾರ್ವಜನಿಕ ಸೌಕರ್ಯಗಳನ್ನು ಆಧುನಿಕ ವಿಜ್ಞಾನದ ಮಾದರಿಯ ರೀತಿ ನಿರ್ಮಾಣ ಮಾಡ ಬಲ್ಲನು ಮತ್ತು ಉಸ್ತುವಾರಿಯನ್ನು ನಡಸಬಲ್ಲನು.

## ೨. ಗೃಹ ಅಥವಾ ವಸತಿ ಸೌಕರ್ಯ

ಹೆಚ್ಚು ಕಾಯಿಲೆಗಳು ಮತ್ತು ಸಾವುಗಳು ಬಹಳ ಒತ್ತಾದ ಮತ್ತು ಅಸಹ್ಯಕರವಾದ ಕೊಳಕು ಪ್ರದೇಶಗಳು ಇರುವ ಪಟ್ಟಣಗಳ ಮತ್ತು ನಗರಗಳ ಕಿರಿದಾದ ಓಣಿಗಳಲ್ಲಿಯೇ ಹೆಚ್ಚು ಎಂಬುದು ಸಿದ್ಧಾಂತಪಡಿಸಿರುವ ವಿಷಯ. ಈ ಸಿದ್ಧಾಂತದ ಪ್ರಕಾರ ತಿಳಿಯುವುದೇನೆಂದರೆ :

(೧) ಸುಮಾರು ಒಂದು ವಾರದವರೆಗೆ ಆಗಿಂದಾಗ್ಗೆ ಬರುವ ಕಾಯಿಲೆಗಳು ಹೆಚ್ಚು ಜನಭರಿತವಾದ ಕೊಳಕಾದ ಓಣಿಗಳಲ್ಲಿಯೇ ಹೆಚ್ಚು.

(೨) ನ್ಯೂಮೋನಿಯಾ, ಕ್ಷಯ ಮೊದಲಾದ ಕಾಯಿಲೆಗಳು ಗಾಳಿ ಬೆಳಕುಗಳಿಲ್ಲದ ಒತ್ತಾದ ಕೊಳಕು ಪ್ರದೇಶಗಳಲ್ಲಿಯೇ ಹೆಚ್ಚು.

(೩) ಮಕ್ಕಳಿಂದ ಮಕ್ಕಳಿಗೆ ಬರುವ ಸಾಂಕ್ರಾಮಿಕ ಮತ್ತು ಅಂಟು ರೋಗಗಳು ಬಡಜನರು ವಾಸಿಸುವ ಕೊಳುಕು ಪ್ರದೇಶಗಳಲ್ಲಿಯೇ ಹೆಚ್ಚು.

೧೯೫೧ನೇ ಇಸವಿಯಲ್ಲಿ ಕಂಡುಹಿಡಿದಿರುವ ಜನಸಂಖ್ಯೆ ಮತ್ತು ವಾಸದ ಮನೆಗಳ ಸಂಖ್ಯೆಯ ಪ್ರಕಾರ, ಈಗ ಹಾಲಿ ಇರುವ ಮನೆಗಳಲ್ಲದೆ ಇಂಡಿಯಾದಲ್ಲಿರುವ ಪಟ್ಟಣಗಳ ಜನರಿಗೆ ಸುಮಾರು ೪೩ ಲಕ್ಷ ಮನೆಗಳು ಬೇಕೆಂದು ನಿರ್ಧರಿಸಲಾಗಿದೆ. ಇದರ ವೆಚ್ಚ ಸುಮಾರು ೧,೫೦೦ ಕೋಟಿ ರೂಪಾಯಿಗಳ ಮೇಲೆ ಆಗಬಹುದು. ಇದು ಶೇಕಡಾ ೧೭ ಇರುವ ನಮ್ಮ ದೇಶದ

ಪಟ್ಟಣಗಳ ಮತ್ತು ನಗರಗಳ ಜನರ ಸಮಸ್ಯೆ. ಇನ್ನು ದೇಶದ ಶೇಕಡಾ ೮೩ ಜನ ವಾಸಮಾಡುವ ಹಳ್ಳಿಗಳ ಜನರ ವಸತಿ ಸೌಕರ್ಯಗಳನ್ನು ಗಮನಿಸಿದರೆ, ನಮ್ಮ ದೇಶದ ಗೃಹ ಮತ್ತು ವಸತಿ ಸೌಕರ್ಯದ ಸಮಸ್ಯೆ ಎಷ್ಟೆಂಬುದರ ಅರಿವಾಗುತ್ತದೆ. ಇಂಡಿಯಾದೇಶದ ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಇಂಡಿಯಾದೇಶವು ಸುಮಾರು ೬೩ ಕೋಟಿ ರೂಪಾಯಿಗಳನ್ನು ಗೃಹನಿರ್ಮಾಣಕ್ಕಾಗಿ ವಿನಿಯೋಗಿಸಿದೆ. ಅಲ್ಲದೆ ಎರಡನೆ ಪಂಚ ವಾರ್ಷಿಕ ಯೋಜನೆಯಲ್ಲಿ ಸುಮಾರು ೧೨೦ ಕೋಟಿರೂಪಾಯಿ ಗಳನ್ನು ಗೃಹ ನಿರ್ಮಾಣಕ್ಕಾಗಿ ವೆಚ್ಚಮಾಡಲಿದೆ.

ಇಷ್ಟು ಮುಖ್ಯವಾದ ಸಮಸ್ಯೆಯಾದ ಗೃಹ ಅಥವಾ ವಸತಿ ಸೌಕರ್ಯವೇನೆಂಬುದನ್ನು ಯೋಚಿಸೋಣ. ಪ್ರಸಿದ್ಧ ಶಿಲ್ಪಿ ಯಾದ “ ಲಿ. ಕಾರ್‌ಬೂಸಿಯರ್ ” ಹೇಳುವುದು ಏನೆಂದರೆ “ ಮನೆ ವಾಸಿಸಲು ಯೋಗ್ಯವಾದ ಒಂದು ಯಂತ್ರ”. ವಾಸಿಸು ವುದು ಎಂದರೆ ಚಳಿ, ಗಾಳಿ, ಬಿಸಿಲು, ಶೀತ ತೇವಗಳಿಗೆ ಮರೆ ಯಾಗಿ ಜೀವಿಸುವುದು; ಜನರು ಮತ್ತು ಪ್ರಾಣಿಗಳು ನುಗ್ಗದಂಥ ಅಥವಾ ಅತಿಕ್ರಮಮಾಡದಂಥ ಸ್ಥಳದಲ್ಲಿ ವಾಸಿಸುವುದು ; ಕಾಯಿಲೆ ಅಥವಾ ಸಾವು ಬಂದಾಗ ಸುರಕ್ಷಿತವಾದ ಕ್ಷೇಮಕರ ವಾದ ಸ್ಥಳದಲ್ಲಿರುವುದು; ಇಷ್ಟಲ್ಲದೆ ಮನುಷ್ಯನ ಸುಖಸಂತೋಷ ಗಳ ಪ್ರತೀಕವಾದ ಸಂಸಾರ ಜೀವನ, ಮಕ್ಕಳ ಬೆಳವಣಿಗೆ, ನೆರೆ ಹೊರೆಯವರ ಸಹಜೀವನ ಮೊದಲಾದುವುಗಳಿಗೆ ಸರಿಹೋಗು ವಂಥಾ ಸ್ಥಳದಲ್ಲಿ ವಾಸಿಸುವುದು. ಜೀವಿಸಿರುವುದು ಅಂದರೆ ಆರೋಗ್ಯವಾಗಿರುವುದು. ಆರೋಗ್ಯವೆಂದರೆ ದೇಹದ, ಮನ ಸ್ಸಿನ, ಮೆದುಳಿನ ಮತ್ತು ಸಮಾಜದ ತೊಂದರೆಗಳಾವುವೂ

ಇಲ್ಲದೆ ಸುಖವಾಗಿರಬಹುದು. ಅಲ್ಲದೆ ಯಾವ ವಿಧವಾದ ರೋಗ ರುಜಿನಗಳೂ ಇರಬಾರದು. ಆದುದರಿಂದ ವಾಸಿಸುವ ಮನೆಯು ಮೇಲ್ಕಂಡ ಸೌಕರ್ಯಗಳನ್ನೆಲ್ಲಾ ಒದಗಿಸುವಂತಿರಬೇಕು.

ಅಲ್ಲದೆ ಡಾ|| ಮೆಕಿಂಟಾಸರು ಹೇಳಿರುವಂತೆ " ಆರೋಗ್ಯ ಮತ್ತು ಸಂತೋಷಗಳಿಂದ ಕೂಡಿರಬೇಕಾದ ಮನೆಯು, ವಾಸಿಸುವ ಮನುಷ್ಯನ ಶತ್ರುವಾಗಿರಬಾರದು. ಮನೆ ಮತ್ತು ಮನೆಯ ಸಾಮಾನು ಸರಂಜಾಮುಗಳು ಸಾಂಸಾರಿಕ ಜೀವನಕ್ಕೆ ಪ್ರೇರಕವಾಗಿರಬೇಕು ; ಮಕ್ಕಳು ಮರಿಗಳನ್ನು ಸಾಕುವುದಕ್ಕೆ ಅನುಕೂಲವಾಗಿರಬೇಕು. ಕಾಯಿಲೆ, ಅಸಮಾಧಾನ, ಅನಾರೋಗ್ಯ ಜುಗುಪ್ಸೆಗಳನ್ನು ಕಲ್ಪಿಸುವ ಸ್ಥಳವು ಮನೆ ಅಥವಾ ಗೃಹವೆಂದು ಅನ್ನಿಸಿಕೊಳ್ಳಲಾರದು."

ಬಡವರು ಬಡತನವನ್ನು ಸೂಚಿಸುವ ಮನೆಗಳಲ್ಲಿ ವಾಸಮಾಡಿ ಕಾಯಿಲೆಯಿಂದ ನರಳಿ, ಸಣ್ಣ ವಯಸ್ಸಿನಲ್ಲಿ ಸತ್ತು, ದೇಶದ ಜನರ ಸರಾಸರಿ ಆಯುಸ್ಸಿನ ಪರಿಮಿತಿಯನ್ನೂ ಮತ್ತು ವರಮಾನವನ್ನೂ ಕಡಮೆ ಮಾಡುತ್ತಾರೆ. ಈ ಕೆಳಗೆ ಕಂಡ ಅಂಕಿ ಅಂಶಗಳಿಂದ ಮೇಲ್ಕಂಡ ವಿಷಯದಲ್ಲಿ ನಾವೆಲ್ಲರೂ ಸರಿ ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

| ದೇಶ | ಪ್ರತಿಯೊಬ್ಬ ಪ್ರಜೆಯ ಸರಾಸರಿ ವರಮಾನ ರೂಪಾಯಿಗಳು | ದೇಶದ ಜನರ ಸರಾಸರಿ ಆಯುಸ್ಸಿನ ಪರಿಮಿತಿ. ವರ್ಷಗಳು |
|---|---|---|
| (೧) ಅಮೆರಿಕಾದ ಸಂಯುಕ್ತ ಸಂಸ್ಥಾನಗಳು | .... ೫೫೪೪ | .... ೬೨ |

| | | |
|---|---|---|
| (೨) ಜರ್ಮನಿ | .... ೫೨೦ | .... ೬೦ |
| (೩) ಸಂಯುಕ್ತ ರಾಜ್ಯಗಳು (ಇಂಗ್ಲಿಷರ) | .... ೪೬೮ | .... ೬೦ |
| (೪) ಮೆಕ್ಸಿಕೋ | .... ೬೧ | .... ೩೭ |
| (೫) ಬ್ರೆಜಿಲ್ | .... ೪೬ | .... ೩೯ |
| (೬) ಇಂಡಿಯಾ | .... ೩೪ | .... ೨೭ |

ಆದುದರಿಂದ ಇಂಡಿಯಾದೇಶದ ಮಹಾಪ್ರಧಾನಿಯವರಾದ ಪಂಡಿತ್ ಜವಹರ್‌ಲಾಲ್ ನೆಹರುರವರು ಈ ವಿಷಯದಲ್ಲಿ ಹೇಳಿರುವ ಈ ಕೆಳಗಿನ ವಿಷಯಗಳನ್ನು ಗಮನಿಸೋಣ. "ಮನೆಯಲ್ಲಿರುವ ಕುಟುಂಬದ ಜನರು ಸಂತೋಷದಿಂದಲೂ ತೃಪ್ತಿಯಿಂದಲೂ ಕೂಡಿರಬೇಕು. ಆದುದರಿಂದ ಪ್ರತಿಯೊಂದು ವಾಸದ ಮನೆಯೂ ಈ ಕೆಳಕಂಡ ಭಾಗಗಳನ್ನು ಹೊಂದಿರಬೇಕು. ಅವು ಯಾವುವೆಂದರೆ,

(೧) ಕೊನೆಯ ಪಕ್ಷ ವಾಸಿಸಲು ಯೋಗ್ಯವಾದ ಎರಡು ಕೊಠಡಿಗಳು (ರೂಮುಗಳು).

(೨) ಸೌಕರ್ಯದಿಂದ ಕೂಡಿದ ಒಂದು ಅಡುಗೆ ಮನೆ.

(೩) ಆರೋಗ್ಯ ನಿಯಮಗಳನ್ನು ಪಾಲಿಸುವಂಥ ಒಂದು ಕಕ್ಕಸು.

(೪) ಸೌಕರ್ಯವುಳ್ಳ ಒಂದು ಸ್ನಾನದ ಮನೆ.

(೫) ಒಂದು ಆವರಣ ಅಥವಾ ವೆರಾಂಡ.

ಮೇಲ್ಕಂಡ ಮಹಾ ಪ್ರಧಾನಿಯವರ ಹೇಳಿಕೆಯಂತೆ ಮತ್ತು ಇತರೇ ಪ್ರಸಿದ್ಧ ಶಿಲ್ಪಿ ಮತ್ತು ವಿಜ್ಞಾನಿಗಳ ಅಭಿಪ್ರಾಯದಂತೆ, ವಾಸದ ಮನೆಗಳನ್ನು ಕಟ್ಟುವ ಪ್ರತಿಯೊಬ್ಬರೂ ಈ ಕೆಳಕಂಡ ಕೆಲವು ಸಾಮಾನ್ಯ ನಿಯಮಗಳನ್ನು ಅನುಸರಿಸಿದರೆ ವಾಸದ ಮನೆಯು ಆರೋಗ್ಯ ಮತ್ತು ಸಂತೋಷದ ಬೀಡಾಗುವುದರಲ್ಲಿ ಸಂದೇಹವಿಲ್ಲ. ಅವು ಯಾವುವೆಂದರೆ :—

(೧) ಮನೆ ಕಟ್ಟುವ ಸ್ಥಳವು ಅಥವಾ ಸೈಟು ಎತ್ತರವಾದ ಸ್ಥಳದಲ್ಲಿಯೂ ತೇವರಹಿತವಾಗಿಯೂ ಇರಬೇಕು. ಮನೆ ಕಟ್ಟುವ ಸ್ಥಳಕ್ಕೆ ಹೆದ್ದಾರಿ ಅಥವಾ ಸಣ್ಣ ರಸ್ತೆಯಿರಬೇಕು. ಈ ರಸ್ತೆಯು ಸಾಕಷ್ಟು ಅಗಲವಾಗಿದ್ದು, ಅದರ ಸುತ್ತಮುತ್ತಲಿನ ಪ್ರದೇಶವು ನೋಡುವುದಕ್ಕೆ ಹಿತಕರವಾಗಿಯೂ ಮನೋಹರವಾಗಿಯೂ ಇರಬೇಕು. ಈ ರಸ್ತೆಯಲ್ಲಿ ಅಥವಾ ಅದರ ಆಜುಬಾಜುಗಳಲ್ಲಿ ಹಳ್ಳಕೊಳ್ಳಗಳಿದ್ದು ಮಳೆ ಬಂದಾಗ ಅವುಗಳಲ್ಲಿ ನೀರು ನಿಂತು ಸೊಳ್ಳೆಗಳ ಉತ್ಪತ್ತಿಗೆ ಅವಕಾಶವಿರಬಾರದು. ಮನೆ ಕಟ್ಟುವ ಸ್ಥಳವು ಉತ್ತಮವಾದ ಮತ್ತು ಗಟ್ಟಿಯಾದ ಸ್ಥಳವಾಗಿದ್ದು, ಅದರ ಮೇಲೆ ಕಟ್ಟಿದ ಮನೆಯು ಕುಸಿಯಲಿಕ್ಕೆ ಅವಕಾಶವಿರಬಾರದು. ಮನೆಗೆ ಪ್ರವೇಶವನ್ನು ಕೊಡುವ ರಸ್ತೆಯ ಅಕ್ಕಪಕ್ಕಗಳಲ್ಲಿ ಯಾವ ವಿಧವಾದ ವಾಸನೆಯಾಗಲೀ ಹೊಗೆಯಾಗಲೀ ಮತ್ತು ಹೆಚ್ಚಾದ ಶಬ್ದಗಳಿಗಾಗಲೀ ಅವಕಾಶವಿರಕೂಡದು. ವಾಸದ ಮನೆ ಕಟ್ಟುವ ಸ್ಥಳದ ಭೂಗರ್ಭವು ತೇವವಿಲ್ಲದೆ, ಗಟ್ಟಿಯಾಗಿ, ಕಲ್ಲು ಭೂಮಿಯಾಗಿ, ಕಟ್ಟಡದ ತಳಪಾಯವನ್ನು ಭದ್ರವಾಗಿ ಕಟ್ಟಲು ಅನುಕೂಲವಾಗಿರಬೇಕು.

(೨) ರಸ್ತೆಯ ಅಂಚಿನಿಂದ ಮನೆಯ ಅಂಚಿಗೆ ಇರಬೇಕಾದ ಸ್ಥಳವು, ಗಾಳಿ ಬೆಳಕುಗಳು ತಡೆಯಿಲ್ಲದೆ ಧಾರಾಳವಾಗಿ ಕಿಟಕಿ ಬಾಗಿಲುಗಳ ಮೂಲಕ ಪ್ರವೇಶಿಸಲು ಅನುಕೂಲಿಸುವಂತೆ ಇರಬೇಕು. ಸಾಧಾರಣವಾದ ಮತ್ತು ಕಡಮೆ ಬೆಲೆಯುಳ್ಳ ವಿಶಾಲವಾದ ಸೈಟಿನಲ್ಲಿ ಕಟ್ಟಿದ ಮನೆಯ ವಿಸ್ತಾರವು ಸೈಟಿನ ವಿಸ್ತಾರದ ೧/೩ ಭಾಗಕ್ಕಿಂತ ಹೆಚ್ಚಿರಬಾರದು. ಆದರೆ ಹೆಚ್ಚು ಬೆಲೆ ಕೊಟ್ಟು ಕೊಳ್ಳುವ ಸೈಟಿನಲ್ಲಿ ಕಟ್ಟುವ ವಾಸದ ಮನೆಯ ವಿಸ್ತಾರವು ಸೈಟಿನ ವಿಸ್ತಾರದ ೨/೩ ಭಾಗಕ್ಕಿಂತ ಹೆಚ್ಚಿರಕೂಡದು.

(೩) ಪ್ರತಿಯೊಂದು ವಾಸದ ಮನೆಗೂ ಸ್ವತಂತ್ರವಾದ ದಾರಿ ಇರಬೇಕು.

(೪) ಮನೆಯ ನೆಲವು ಸುಲಭವಾಗಿ ತೊಳೆಯುವುದಕ್ಕೂ ಮತ್ತು ಅಚ್ಚುಕಟ್ಟಾಗಿ ತೇವವಿಲ್ಲದಂತೆ ಇಟ್ಟುಕೊಳ್ಳುವುದಕ್ಕೂ ಸಹಾಯಕವಾಗಿರಬೇಕು. ಕಡಪಕಲ್ಲು, ಚಪ್ಪಡಿ, ಸಿಮೆಂಟ್ ಮತ್ತು ಗಾರೆಯಿಂದ ಕೂಡಿದ ಕಾಂಕ್ರೀಟ್ ನೆಲಗಳು ಮೇಲ್ಕಂಡ ಸೌಕರ್ಯವನ್ನು ಒದಗಿಸುತ್ತವೆ. ಅಲ್ಲದೆ ಇಲಿ ಹೆಗ್ಗಣಗಳು ಸೇರುವುದಕ್ಕೆ ಅವಕಾಶವನ್ನು ಕಡಮೆ ಮಾಡುತ್ತವೆ. ಮನೆಯ ಒಳಗಿನ ನೆಲದ ಮಟ್ಟವನ್ನು ಮತ್ತು ತೇವವನ್ನು ತಡೆಯುವ ವಸ್ತುಗಳನ್ನು ಇಡುವ ಮಟ್ಟವನ್ನು ಸುತ್ತಮುತ್ತಲಿನ ಭೂಮಿಯ ಮಟ್ಟಕ್ಕಿಂತ ೧ರಿಂದ ೩ಅಡಿಗಳ ಎತ್ತರದಲ್ಲಿ ನೆಲದ ಮಣ್ಣಿನ ಗುಣವನ್ನು ನೋಡಿಕೊಂಡು ನಿರ್ಧರಿಸತಕ್ಕದ್ದು.

(೫) ಸಾಧಾರಣವಾಗಿ ಮನುಷ್ಯನನ್ನು ಶೇಕಡ ೩೩ಭಾಗ ಎಫಿಷಿಯನ್ಸಿ (Efficiency) ಇರುವ ಒಂದು ಇಂಟರ್‌ನಲ್ ಕಂಬಸ್ಟಚನ್ ಎಂಜಿನ್ (Internal combustion

engine) ಗೆ ಹೋಲಿಸಬಹುದು. ಏಕ್ಕ ಶೇಕಡ ೬೭ ಭಾಗ ಶಾಖವನ್ನು ದೇಹವು ಸದಾ ಚರ್ಮ ಬಾಯಿ, ಮೂಗು ಮತ್ತು ಇತರೆ ಅಂಗಗಳ ಮೂಲಕ ಹೊರಗೆಡಹುತ್ತಾ ಇರುತ್ತದೆ. ಈ ರೀತಿ ಸುಲಭವಾಗಿ ಮಾಡಲು ಆಗದೆ ಇದ್ದಲ್ಲಿ ದೇಹದಲ್ಲಿ ಬಹಳ ಸಂಕಟವಾಗುತ್ತದೆ; ಕಾಯಿಲೆಗಳು ಬರಲೂ ಕಾರಣವಾಗುತ್ತದೆ. ದೇಹದ ಸಾಧಾರಣ ಶಾಕವಾದ 98°F ಗಿಂತ ಹೊರಗಿನ ವಾತಾವರಣದ ಶಾಖದಲ್ಲಿ ಬಹಳ ಏರುಪೇರುಗಳಿದ್ದಲ್ಲಿ, ಅದನ್ನು ಸಹಿಸಿ ಕೊಳ್ಳಲು ದೇಹವು ಶ್ರಮಪಡಬೇಕಾಗುತ್ತದೆ. ಆದುದರಿಂದ ನಾವು ನಮ್ಮ ವಾಸದ ಮನೆಯನ್ನು ಕಟ್ಟುವ ವಸ್ತುಗಳು ಶಾಖವನ್ನು ಬಹಳ ಕಡಮೆಯಾಗಿ ಹೀರುವಂತಹವೂ ಮತ್ತು ಅವುಗಳುಷ್ಣವಾಹಕ ಶಕ್ತಿಯು ಕಡಮೆಯಾಗಿಯೂ ಇರಬೇಕು ಹಾಗಿದ್ದಲ್ಲಿ ಮಾತ್ರ ನಮ್ಮ ವಾಸದ ಮನೆಯ ಒಳಗಿನ ಶಾಖವು ಹಿತಕರವಾಗಿರಲು ಸಾಧ್ಯ. ಹೊರಗಿನ ಗೋಡೆಯನ್ನು ಕಟ್ಟುವ ವಸ್ತುಗಳ ಉಷ್ಣವ್ಯಾಪಕ ಶಕ್ತಿಯು ಮತ್ತು ಶಾಖವನ್ನು ಹೀರುವ ಕ್ತಿಯು ಆದಷ್ಟು ಮಟ್ಟಿಗೆ ಕಡಮೆ ಇರಬೇಕು. (U=0.20 B.Th.U.ಚ.ಅ. 1°F. ಇರಬೇಕು. U=0.35B .Th.U. ಚ.ಅ. 1° F ಗಿಂತ ಹೆಚ್ಚು ಇರಬಾರದು. ಈ ಶಕ್ತಿಯು ಲೋಹಗಳಿಗೆ ಹೆಚ್ಚು.) ಗೋಡೆಯನ್ನು ಕಟ್ಟುವ ವಸ್ತುಗಳ ಶಬ್ದ ವ್ಯಾಪಕ ಶಕ್ತಿಯೂ ಕಡಮೆ ಇರಬೇಕು. ಗೋಡೆಗಳು ನುಣುಪಾಗಿಯೂ ತೊಳೆಯುವುದಕ್ಕೆ ಮತ್ತು ಇತರೇ ಶುಚಿತ್ವದ ಕೆಲಸಗಳಿಗೆ ಅನುಕೂಲವಾಗಿಯೂ ಇರಬೇಕು. ಗಾಳಿಮಳೆಗಳ ಹೊಡೆತ

ವನ್ನು ತಡೆಯುವಷ್ಟುಮಟ್ಟಿಗೆ ಗೋಡೆಗಳು ಶಕ್ತಿಯುತವಾಗಿರ ಬೇಕು. ಗೋಡೆಗಳಲ್ಲಿ ಇಲಿಗಳು, ಗೆದ್ದಲು ಮೊದಲಾದವುಗಳು ಸೇರುವುದಕ್ಕೆ ಅವಕಾಶವಿಲ್ಲದಂತಿರಬೇಕು. ಗೋಡೆಗಳನ್ನು ಸುಲಭವಾಗಿ ನಾಶಮಾಡುವುದಕ್ಕೆ ಸಾಧ್ಯವಿಲ್ಲದಂತೆಯೂ ಗೋಡೆ ಗಳಿಗೆ ಏನಾದರೂ ಭಾರವಾದ ವಸ್ತುಗಳನ್ನು ಒರಗಿಸಿದಲ್ಲಿ ಗೋಡೆಗೆ ಜಖಂ ಆಗದಷ್ಟು ಶಕ್ತಿಯುತವಾಗಿಯೂ, ಒದೆತ ಗಳೇನಾದರೂ ಗೋಡೆಗೆ ಬಿದ್ದರೆ ತಡೆಯುವಷ್ಟು ಶಕ್ತಿಯುತ ವಾಗಿಯೂ ಇರುವಂತೆ ನಿರ್ಮಾಣಮಾಡಬೇಕು. ಗೋಡೆಯ ಕೆಲಸಗಳು ಪೂರೈಸಿದ ನಂತರ ಗೋಡೆಗೆ ಹಚ್ಚುವ ಬಣ್ಣವು ಮನೋಹರವಾಗಿಯೂ ಮತ್ತು ಬೆಳಕನ್ನು ಹೆಚ್ಚು ಸೆರೆಹಿಡಿಯ ದಂತೆಯೂ ಇರಬೇಕು. ಕಪ್ಪು ಮತ್ತು ಪಾಸಲು ಬಣ್ಣಗಳು ಬೆಳಕನ್ನು ಹೆಚ್ಚು ಸೆರೆಹಿಡಿಯುತ್ತವೆ. ಪ್ರತಿಯೊಂದು ಗೋಡೆ ಯೂ ಸಾಕಷ್ಟು ಎತ್ತರವಾಗಿದ್ದು ವಾಸದ ಮನೆಯೊಳಗಿನ ಗುಪ್ತತೆ ಮತ್ತು ಸುರಕ್ಷತೆಯನ್ನು ಕಾಪಾಡುವಂತಿರಬೇಕು. ಸಾಧಾರಣ ವಾಗಿ ಹೇಳುವುದಾದರೆ ೯ ಇಂಚು ಅಥವಾ 20 ಸೆಂಟಿಮೀಟರ್ ಗಳಿಗಿಂತ ಕಡಮೆ ದಪ್ಪವಿಲ್ಲದ ಇಟ್ಟಿಗೆ ಗೋಡೆಯು ಚೆನ್ನಾಗಿ, ನುಣುಪಾಗಿ ಇರಬೇಕು. ಸೀಮೆಂಟ್ ಅಥವಾ ಗಾರೆಯಿಂದ ಮೆತ್ತನೆ ಕೆಲಸ ಮಾಡಿ ಅಥವಾ ಪ್ಲಾಸ್ಟರ್ ಮಾಡಿ, ಬಿಳಿಯ ಕ್ರೀಮ್ ಬಣ್ಣವನ್ನು ಬಳಿದಿರುವ ಗೋಡೆಯು ಬಹುಮಟ್ಟಿಗೆ ಮೇಲೆ ಸೂಚಿಸಿರುವ ಗುಣಗಳನ್ನು ಹೊಂದಿರಬಲ್ಲದು.

(೬) ಮನೆಯ ಚಾವಣಿಯನ್ನು ಕಟ್ಟುವ ವಸ್ತುಗಳ ಉಷ್ಣ ವ್ಯಾಪಕ ಶಕ್ತಿಯೂ ಮತ್ತು ಶಾಖವನ್ನು ಹೀರುವ ಶಕ್ತಿಯೂ ಆದಷ್ಟುಮಟ್ಟಿಗೆ ಕಡಮೆ ಇರಬೇಕು. ಉಷ್ಣದೇಶಗಳಲ್ಲಿ ವಾಸಿ

ಸುವ ನೆಲದಿಂದ ಚಾವಣಿಗೆ ಇರುವ ಎತ್ತರವು ಹತ್ತು ಅಡಿ ಅಥವಾ ಮೂರು ಮೀಟರ್‌ಗಳಿಗಿಂತ ಕಡಮೆ ಇರಬಾರದು. ನಮ್ಮ ನಿಲು ವಿನ ಎತ್ತರದ ಮೇಲೆ ಇರುವ ಗಾಳಿಯ ಎತ್ತರವು ಹೆಚ್ಚಾ ದಂತೆಲ್ಲಾ ಮನೆಯ ಒಳಗಿನ ವಾತಾವರಣವು ಹೆಚ್ಚು ಹಿತಕರ ವಾಗಿರುತ್ತದೆ. ಏಕೆಂದರೆ ಗಾಳಿಗೆ ಇರುವ ಉಷ್ಣವಾಹಕ ಶಕ್ತಿ ಯು ಬಹಳ ಕಡಮೆ.

(೭) ವಾಸಕ್ಕೆ ತಕ್ಕುದಾದ ಕೊಠಡಿಯ ಸಂಖ್ಯೆಯು ಪ್ರತಿ ವಾಸದ ಮನೆಯಲ್ಲಿ ಎರಡಕ್ಕಿಂತ ಕಡಮೆ ಇಡಬಾರದು. ಅದ ರಲ್ಲಿ ಒಂದು ಕೊಠಡಿಯು ಹೊರಗಿನ ಜನರು ಸುಲಭವಾಗಿಪ್ರವೇ ಶಿಸದಂತಿದ್ದು, ಆ ಕುಟುಂಬದ ಹೆಚ್ಚು ಬೆಲೆಬಾಳುವ ಸಾಮಾನು ಗಳು ಇಡುವುದಕ್ಕೂ ಮತ್ತು ಸಾಂಸಾರಿಕ ಜೀವನ ನಡೆಸುವ ವಯಸ್ಸಿನ ದಂಪತಿಗಳು ಮಲಗುವುದಕ್ಕೂ ಅನುಕೂಲವಾಗಿ ಬೇಕು. ಮತ್ತೊಂದು ಕೊಠಡಿ ಹೊರಗಿನ ಮತ್ತು ಒಳಗಿನ ಆವರಣಗಳಿಗೆ ಹೊಂದಿಕೊಂಡಿದ್ದು, ದಂಪತಿಗಳ ಹೊರತು ಮಿಕ ಕುಟುಂಬದ ಜನರು ಮಲಗುವ ಅವಕಾಶವಿರಬೇಕು. ಬೆಳೆದ ತಾರುಣ್ಯಕ್ಕೆ ಕಾಲಿಟ್ಟ ಮಕ್ಕಳಿಗೆ ಬೇರೆ ಬೇರೆ ಕೊಠ ಗಳು ಮಲಗುವುದಕ್ಕೆ ಇರಬೇಕು. ಇಲ್ಲದೆ ಹೋದಲ್ಲಿ ನೈಸರ್ಗಿ ಮತ್ತು ತಾರುಣ್ಯದ ಸಾಂಸಾರಿಕ ಜೀವನಕ್ಕೆ ಪ್ರಚೋದ ದೊರಕಿದಂತಾಗಿ, ಅವರ ನಡತೆ ಮತ್ತು ದೇಹಗಳನ್ನು ಕೆಡಿ ಕೊಳ್ಳುವ ಸಂಭವವುಂಟು. ಕೊಠಡಿಗಳ ಸಂಖ್ಯೆ ಮತ್ತು ಅ ಗಳ ವಿಸ್ತಾರವು ಕುಟುಂಬದಲ್ಲಿರುವ ಜನರ ಸಂಖ್ಯೆಯನ್ನು ಅ ಲಂಬಿಸಿರಬೇಕು ಮತ್ತು ಸಾಕಷ್ಟು ವಿಸ್ತೀರ್ಣವು ಪ್ರತಿಯೊ ಕುಟುಂಬದ ಸದಸ್ಯನಿಗೂ ದೊರಕಬೇಕು.

(೮) ಒಬ್ಬರಿಗಿಂತ ಹೆಚ್ಚು ಜನರು ವಾಸಿಸುವ ಕೊಠಡಿಗಳ ವಿಸ್ತಾರವು ೧೨೦ ಚ. ಅ. ಅಥವಾ ೧೨ ಚ. ಮೀ. ಗಳಿಗಿಂತ ಕಡಮೆ ಇರಬಾರದು. ಒಬ್ಬ ವಾಸಿಸುವ ಕೊಠಡಿಯ ವಿಸ್ತೀರ್ಣವು ೧೦೦ ಚ. ಅ.(೧೦ ಚ.ಮೀ) ಗಳಿಗಿಂತ ಕಡಮೆ ಇರಬಾರದು. ಕೊಠಡಿಗಳನ್ನು ಕಟ್ಟುವ ಯೋಜನೆಯನ್ನು ತಯಾರಿಸುವಾಗ ಪ್ರತಿಯೊಬ್ಬ ಕುಟುಂಬದ ಸದಸ್ಯನಿಗೂ ಕೊನೆಯ ಪಕ್ಷ ೫೦ ಚ. ಅ. (೫ ಚ. ಮೀ) ಗಳಷ್ಟು ನೆಲದ ವಿಸ್ತೀರ್ಣವು ದೊರಕುವಂತೆ ಯೋಜನೆಯನ್ನು ತಯಾರಿಸಬೇಕು.

(೯) ಕೊಠಡಿಗಳನ್ನು ನಿರ್ಮಿಸುವ ಯೋಜನೆಯನ್ನು ತೆಗೆದು ಕೊಂಡಾಗ ಕುಟುಂಬದ ಪ್ರತಿಯೊಬ್ಬ ಸದಸ್ಯನಿಗೂ, ಕೊನೆಯ ಪಕ್ಷ ಸುಮಾರು ೫೦೦ ಘ. ಅ. ಯ ಅಥವಾ ೧೫ ಘ. ಮೀ ಗಾಳಿಯ ಆವರಣವು ದೊರಕುವಂತೆ ಯೋಜನೆಯನ್ನು ತಯಾರಿಸಬೇಕು.

(೧೦) ಬಾಗಿಲು ಕಿಟಕಿಗಳ ವಿಸ್ತಾರವು ನೆಲದ ವಿಸ್ತಾರದ ಏಳನೆಯ ಒಂದು ಭಾಗಕ್ಕಿಂತ ಕಡಮೆ ಇರಬಾರದು. ಕಿಟಕಿಗಳ ವಿಸ್ತಾರ ವಾಸಿಸುವ ನೆಲದ ವಿಸ್ತಾರದ ಹದಿನೈದನೆಯ ಒಂದು ಭಾಗಕ್ಕಿಂತ ಕಡಮೆ ಇರಬಾರದು. ಬಾಗಿಲು ಕಿಟಕಿಗಳ ವಿಸ್ತಾರದ ಶೇಕಡಾ ೨ ಭಾಗವಾದರೂ ವೆಂಟಿಲೇಟರುಗಳಿಂದ ಕೂಡಿರಬೇಕು. ಪ್ರತಿಯೊಂದು ವಾಸಿಸುವ ಕೊಠಡಿಗೂ ಕೊನೆಯ ಪಕ್ಷ ಎರಡು ಕಿಟಕಿಗಳಿರಬೇಕು. ಅದರಲ್ಲಿ ಒಂದಾದರೂ ತಡೆಯಿಲ್ಲದ ಆವರಣದ ಕಡೆಗೋ ಅಥವಾ ಬಯಲಿನ ಕಡೆಗೋ ಇರಬೇಕು. ಕಿಟಕಿಗಳ ಕೆಳಭಾಗವು ವಾಸಿಸುವ ಕೊಠಡಿಯ ನೆಲದ ಮಟ್ಟದಿಂದ ಅಥವಾ ಜೇಸ್‌ಮೆಂಟ್ ಚಪ್ಪಡಿಯ ಮೇಲೆ

೩ ಅಡಿಗಳಿಗಿಂತ (೧ ಮೀ) ಹೆಚ್ಚು ಎತ್ತರದಲ್ಲಿ ಇರಬಾರದು. ಇದರಿಂದ ನಮ್ಮ ದೇಹಗಳ ಮೇಲೆ ತಂಪಾದ ಗಾಳಿಯು ಬೀಸುವುದಕ್ಕೆ ಅನುಕೂಲವಾಗುತ್ತದೆ. ಹಗಲಿನಲ್ಲಿ ಬಯಲಿನಲ್ಲಿ ಇರುವ ಬೆಳಕಿನ ಶೇಕಡಾ ಒಂದು ಭಾಗವಾದರೂ, ವಾಸಿಸುವ ಕೊಟಡಿಯ ನೆಲದ ಅರ್ಧಭಾಗದಲ್ಲಿ ಬೀಳುವಂತೆ ಕಿಟಕಿಗಳ ವಿಸ್ತೀರ್ಣವಿರಬೇಕು. ಕಿಟಕಿ ಕಂಬಿಗಳು ಗಾಳಿ ಬೆಳಕು ಬರುವ ವಿಸ್ತಾರವನ್ನು ಶೇಕಡಾ ೩೦ ರಷ್ಟು ಕಡಮೆ ಮಾಡುತ್ತವೆ. ಎತ್ತರವಾದ ಕಿಟಕಿಗಳಿಂದ ಹೆಚ್ಚು ಬೆಳಕು ಬರಲು ಸಹಾಯವಾಗುತ್ತದೆ. ಅಡ್ಡ ಕಿಟಕಿಗಳಿಂದ ಮನೆಯ ಒಳಗಡೆ ಒಂದೇ ಸಮನಾದ ಬೆಳಕು ಪಸರಿಸಲು ಸಹಾಯವಾಗುತ್ತದೆ.

(೧೧) ಕಿಟಕಿ ಬಾಗಿಲುಗಳ ಸ್ಥಾನವು ವಾಸಿಸುವ ಮನೆಯ ಗುಪ್ತತೆಯನ್ನು ರಕ್ಷಿಸುವಂತಿರಬೇಕು. ವಾಸಿಸುವ ಮನೆಯ ಹೊರಬಾಗಿಲು ಕಿಟಕಿಗಳನ್ನು ಮುಚ್ಚಿದಾಗ ಹೊರಗಿನ ಹೆಚ್ಚಿನ ಶಾಖ ಮತ್ತು ಬೆಳಕನ್ನು ಪೂರ್ಣವಾಗಿ ತಡೆಯಲು ಸಾಧ್ಯವಾಗಬೇಕು. ಬಾಗಿಲುಗಳನ್ನು ಪೂರ್ತಿಯಾಗಿ ತೆಗೆದಾಗ ಜಾಗ್ರತೆ ಕೊಠಡಿಗಳ ಒಳಗೆ ತಂಪಾಗುವಂತೆ ಇರಬೇಕು.

(೧೨) ಹಗಲಿನ ಬೆಳಕಿನ ಜೊತೆಗೆ ಬೇಕಾದ ಕಡೆ ಸಾಕಷ್ಟು ಸರಿಯಾದ ಕೃತಕ (ವಿದ್ಯುಚ್ಛಕ್ತಿ, ಎಣ್ಣೆ ದೀಪಗಳು) ಬೆಳಕನ್ನು ಪ್ರತಿಯೊಂದು ವಾಸಿಸುವ ಕೊಠಡಿಗೂ ದೊರಕಿಸಿಕೊಡಬೇಕು.

(೧೩) ಪ್ರತಿಯೊಂದು ವಾಸದ ಮನೆಗೂ ಧೂಳಿನಿಂದ ರಕ್ಷಿತವಾದ ಮತ್ತು ಹೊಗೆ ಹೋಗಲು ಸೌಕರ್ಯವಿರುವ ಒಂದು ಅಡಿಗೆ ಮನೆ ಇರಬೇಕು. ಇದರೊಳಗೆ ಚೆನ್ನಾಗಿ ಗಾಳಿ ಬೆಳಕು ಬರುವಂತೆ ಕಿಟಕಿಗಳಿರಬೇಕು. ಅಡಿಗೆ ಮನೆಯಲ್ಲಿ ತಿಂಡಿ

ಪದಾರ್ಥಗಳನ್ನು, ದಿನಸಿ ಪದಾರ್ಥಗಳನ್ನು ಮತ್ತು ಸೌದೆ ಮೊದಲಾದುವನ್ನು ಶೇಖರಿಸಿ ಇಡಲು ತಕ್ಕ ಸೌಕರ್ಯವಿರಬೇಕು. ಅಡಿಗೆಮನೆಯಲ್ಲಿ ಕೊಳಾಯಿ, ಪಾತ್ರೆ ಪದಾರ್ಥಗಳನ್ನು ತೊಳೆಯಲು ತೊಟ್ಟಿ ಇರಬೇಕು. ಮನೆ ತೊಳೆದ ನೀರು ಹೊರಗೆ ಹೋಗುವುದಕ್ಕೆ ತಕ್ಕ ಸೌಕರ್ಯವಿರಬೇಕು. ಅಡಿಗೆ ಮನೆಯ ವಿಸ್ತೀರ್ಣ ೮ ಅಡಿ (೨ ೧/೨ ಮೀ)ಉದ್ದ ೬ ಅಡಿ (೨ ಮೀ) ಅಗಲಕ್ಕಿಂತ ಕಡಮೆ ಇರಬಾರದು.

(೧೪) ಪ್ರತಿಯೊಂದು ವಾಸದ ಮನೆಗೂ ಸುರಕ್ಷಿತವಾದ, ಪುಷ್ಕಳವಾದ ಕುಡಿಯುವ ನೀರಿನ ಸರಬರಾಜು ಇರಬೇಕು.

(೧೫) ಪ್ರತಿ ಮನೆಗೂ ಒಂದು ಸ್ವತಂತ್ರವಾದ, ಶುಚಿಯಾದ, ಆರೋಗ್ಯನಿಯಮಗಳನ್ನು ಅನುಸರಿಸಿದಂಥ ಒಂದು ಕಕ್ಕಸು ಇರಬೇಕು. ಕಕ್ಕಸಿನ ವಿಸ್ತೀರ್ಣ ೩' - ೦"×೨' - ೬" (೧ ಮೀ×೩/೪ಮೀ) ಕ್ಕಿಂತ ಕಡಮೆ ಇರಬಾರದು.

(೧೬) ಮನೆಯ ಕುಟುಂಬದವರಿಂದ ವಿಸರ್ಜಿಸಲ್ಪಟ್ಟ ಕಸ ಕಡ್ಡಿ, ಗಲೀಜುನೀರು ಮೊದಲಾದುವುಗಳನ್ನು ಆರೋಗ್ಯ ನಿಯಮಗಳನ್ನು ಅನುಸರಿಸಿ ವಿಸರ್ಜಿಸುವ ವ್ಯವಸ್ಥೆ ಇರಬೇಕು. ಈಗ ತಿಳಿದಿರುವ ಪ್ರಕಾರ ಸರಾಸರಿ ಒಬ್ಬ ಮನುಷ್ಯನ ಕಸಕಡ್ಡಿ ೧/೧೦ಘ. ಅ. (೧/೩೦೦ ಘ.ಮೀ) ಗಳಾಗುವುದೆಂದು ಕಂಡು ಹಿಡಿದಿದ್ದಾರೆ. ಆದುದರಿಂದ ೫ ಜನರಿರುವ ಒಂದು ಕುಟುಂಬದ ಸರಾಸರಿ ಕಸಕಡ್ಡಿಗಳು ದಿನಕ್ಕೆ ೧/೨ಘ.ಅ. (೧/೬೦ ಘ.ಮೀ) ಗಳಾಗುತ್ತದೆ. ಈ ಅಂಕೆ ಅಂಶಗಳು ಕಸದ ತೊಟ್ಟಿಗಳ ಯೋಜನೆಯನ್ನು ತಯಾರಿಸುವಾಗ ಉಪಯೋಗವಾಗುತ್ತವೆ.

(೧೭) ಪ್ರತಿ ಮನೆಗೂ ಸ್ನಾನಮಾಡಲು ಮತ್ತು ಬಟ್ಟೆಗಳನ್ನು

ಒಗೆಯಲು ಸ್ವತಂತ್ರವಾದ, ಅಚ್ಚುಕಟ್ಟಾದ, ಮರೆಯಾದ ವ್ಯವಸ್ಥೆ ಇರಬೇಕು,

(೧೮) ಚಳಿಗಾಲದಲ್ಲಿ ವಾಯುಗುಣದಲ್ಲಿನ ಶಾಖವು ಒಂದು ವಾರಕ್ಕಿಂತ ಹೆಚ್ಚು ದಿನಗಳಲ್ಲಿ ೫೦°F (೧೦°C) ಗಳಿಗಿಂತ ಕಡಿಮೆಯಾಗಿದ್ದರೆ ಅಂಥ ಸ್ಥಳಗಳಲ್ಲಿ ಕಟ್ಟುವ ಕೊಠಡಿಗಳನ್ನು ಶಾಖವಾಗಿಡಲು ತಕ್ಕ ವ್ಯವಸ್ಥೆ ಮಾಡಬೇಕು.

(೧೯) ಬೇಸಿಗೆಯಲ್ಲಿ ವಾಯುಗುಣದ ಶಾಖವು ೧೦೫°F (೪೦°C) ಗಿಂತ ಹೆಚ್ಚು ಶಾಖವಾಗಿರುವ ಕಡೆಗಳಲ್ಲಿ ಮನೆಗೆ ಹೊಂದಿರುವ ಮತ್ತು ಎತ್ತರವಾದ ಗೋಡೆಯಿಂದ ಸುತ್ತುವರಿಯಲ್ಪಟ್ಟ ಒಳ ಆವರಣವಾಗಲೀ ಅಥವಾ ಮಾಳಿಗೆಯಾಗಲೀ ಸಾಕಷ್ಟು ವಿಸ್ತಾರವಾಗಿ, ಮನೆಯ ಜನರು ರಾತ್ರಿ ಕಾಲಗಳಲ್ಲಿ ಯಾವ ತೊಂದರೆಯೂ ಇಲ್ಲದೆ ಮಲಗಲು ಅನುಕೂಲವಿರಬೇಕು.

(೨೦) ಮನೆಗೆ ಹೊಂದಿಕೊಂಡಂತೆ ಹಸು ಕೋಳಿ ಮೊದಲಾದುವುಗಳನ್ನು ಸಾಕಬೇಕಾದರೆ, ಅಥವಾ ತೋಟ ಮಾಡಬೇಕಾದರೆ, ಅಥವಾ ಬಡಗಿ, ಕಮ್ಮಾರ ಮೊದಲಾದ ಸಣ್ಣ ಕೈಕಸಬುಗಳನ್ನು ಮಾಡಬೇಕಾದರೆ ಆ ಕಸಬುಗಳಿಗೆ ಹೊಂದಿಕೊಳ್ಳುವಂತೆ ಮನೆಯ ಪೂರ್ತಾ ಯೋಜನೆಯನ್ನು ತಯಾರಿಸಬೇಕು.

(೨೧) ಮನೆ ಕಟ್ಟುವುದಕ್ಕೆ ಉಪಯೋಗಿಸುವ ವಸ್ತುಗಳು, ಕಟ್ಟಡ ಭದ್ರವಾಗಿರುವುದಕ್ಕೂ, ಪ್ಲಂಬಿಂಗ್ ಮೊದಲಾದ ಇತರೇ ಸೌಕರ್ಯ ಸಹಕಾರಿ ವಸ್ತುಗಳನ್ನು ಅಳವಡಿಸುವುದಕ್ಕೂ, ಬೆಂಕಿಯ ಭಯಕ್ಕೆ ಆಸ್ಪದ ಕಡಿಮೆ ಇರುವಂತೆಯೂ, ಮತ್ತು ಎಲೆಕ್ಟ್ರಿಕ್ ಮೊದಲಾದ ಸೌಕರ್ಯಗಳನ್ನು ಅಳವಡಿಸುವುದಕ್ಕೆ

ಅನುಕೂಲವಾಗಿಯೂ ಇರಬೇಕು.

ಈ ಮೇಲ್ಕಂಡ ಸೂತ್ರಗಳನ್ನು ಅನುಸರಿಸಿಯೇ ಪ್ರತಿ ಮುನಿಸಿ ಪಾಲಿಟಿಯವರು ತಮ್ಮ ತಮ್ಮ ಮುನಿಸಿಪಲ್ ಬೈಲಾಗಳನ್ನು ತಯಾರಿಸುವುದು ಮತ್ತು ತಯಾರಿಸಬೇಕಾಗಿರುವುದು. ಈ ಸೂತ್ರಗಳನ್ನು ಅನುಸರಿಸಿ ಸರಿಯಾದ ಸೌಕರ್ಯಯುತವಾದ ವಾಸದ ಮನೆಗಳನ್ನು ಕಟ್ಟಬೇಕಾದರೆ, ಜನಾರೋಗ್ಯ ಇಂಜನಿಯರ್ ಶಿಲ್ಪಿ ಸಹಾಯ, ಸಲಹೆಗಳನ್ನು ತೆಗೆದುಕೊಳ್ಳಬೇಕು. ಈತನು ತಕ್ಕ ಪ್ಲಾನುಗಳು ಮತ್ತು ನಕ್ಷೆಗಳನ್ನು ತಯಾರಿಸುವುದಲ್ಲದೆ ಕಟ್ಟುವಾಗ ಅನುಸರಿಸಬೇಕಾದ ಕ್ರಮಗಳ ವಿಷಯದಲ್ಲಿಯೂ ಸಲಹೆ ಕೊಡಬಲ್ಲನು.

## ೩. ಹಳ್ಳಿ, ಪಟ್ಟಣ ಮತ್ತು ನಗರಗಳನ್ನು ಆಧುನಿಕ ವಿಜ್ಞಾನದ ಮಾದರಿಯಲ್ಲಿ ಯೋಜನೆ ಮಾಡಿ ನಿರ್ಮಾಣ ಮಾಡುವುದು

ಮನೆಗಳು ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಮತ್ತು ನಗರಗಳಲ್ಲಿ ಎಲ್ಲಿಯಾದರೂ ಇರಬಹುದು ಆದರೆ ಮನೆಗಳಿಗೆ ಬೇಕಾದ ಎಲ್ಲಾ ಸೌಕರ್ಯಗಳನ್ನು ಸರಾಗವಾಗಿ ಒದಗಿಸಬೇಕಾದರೆ ಹಳ್ಳಿಯನ್ನಾಗಲೀ ಪಟ್ಟಣವನ್ನಾಗಲೀ ಅಥವಾ ನಗರವನ್ನಾಗಲಿ ಆಧುನಿಕ ವಿಜ್ಞಾನದ ಮಾದರಿಯಲ್ಲಿ ಸಕಲ ಸೌಕರ್ಯಗಳೂ ಆದಷ್ಟು ಮಟ್ಟಿಗೆ ದೊರಕುವಂತೆಯೂ, ನೋಡುವುದಕ್ಕೆ ಅಚ್ಚುಕಟ್ಟಾಗಿ ಇರುವಂತೆಯೂ, ಯೋಜನೆಗಳನ್ನು ತಯಾರಿಸಿ ಅದರಂತೆ ನಿರ್ಮಾಣ ಮಾಡಬೇಕು. ಇಲ್ಲವಾದಲ್ಲಿ ಸಕಲ ಸೌಕರ್ಯಗಳು ಇರುವ ಮಾದರಿ ವಾಸದ ಮನೆಗಳನ್ನು ಕಟ್ಟಲು ಅಸಾಧ್ಯ.

**ಪಟ್ಟಣ ಮತ್ತು ನಗರಗಳ ಯೋಜನೆ:—** ಇರುವ ಪಟ್ಟಣಗಳ ಸೌಂದರ್ಯ ಮತ್ತು ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅಲ್ಲಿ ನೆಲಸಿರುವ ಜನರ ಅಭಿರುಚಿಯನ್ನು ಅನುಸರಿಸಿ ಒಂದು "ಮಾಸ್ಟರ್ ಪ್ಲಾನ" ನ್ನು ತಯಾರಿಸಬೇಕು. ಈ ಯೋಜನೆಯಲ್ಲಿ ಬಹು ಮುಖ್ಯವಾದ ಕೆಲವು ಸೂತ್ರಗಳನ್ನು ಅನುಸರಿಸಿದರೆ ಸಾಕು. ಜನಾರೋಗ್ಯ ಇಂಜನೀಯರ್ ಶಿಲ್ಪಿಯ ಸಲಹೆಗಳ ಪ್ರಕಾರ ಮುಖ್ಯ ನಗರವನ್ನು ಹೊಂದಿಕೊಂಡಿರುವಂತೆ, ಸಣ್ಣ ಸಣ್ಣ ಉಪನಗರಗಳನ್ನು ಕಟ್ಟಲು ಯೋಜನೆಯನ್ನು ತಯಾರಿಸ

ಬೇಕು. ಜನಾರೋಗ್ಯ ಇಂಜನಿಯರ್ ಶಿಲ್ಪಿಯು ಅಂಥಾ ಉಪನಗರಗಳಿಗೆ ಬೇಕಾದ ಸೌಕರ್ಯಗಳಾದ, ವಾಸಿಸುವ ಮನೆಗಳಿಗೆ ಬೇಕಾದ ತಕ್ಕ ಸ್ಥಳ, ಗಾಳಿ, ಬೆಳಕು, ನೀರುಸರಬರಾಜು, ಮಲಮೂತ್ರಗಳನ್ನು ಸಾಗಿಸುವ ವ್ಯವಸ್ಥೆ, ಮೊದಲಾದ ಮುಖ್ಯ ವಿಷಯಗಳನ್ನು ಗಮನಿಸಿ ತನ್ನ ಅಭಿಪ್ರಾಯವನ್ನು ಕೊಡಬಲ್ಲನು. ಹಾಗೆಯೇ ಒತ್ತಾದ ಮತ್ತು ಕೊಳಕು ಪ್ರದೇಶಗಳನ್ನು ನಿರ್ಮೂಲ ಮಾಡುವ ವಿಷಯದಲ್ಲಿಯೂ ಈತನ ಸಲಹೆ ಪಡೆಯಬಹುದು.

ಸಾಧಾರಣವಾಗಿ ನಗರಗಳನ್ನು ನಿರ್ಮಾಣ ಮಾಡುವಾಗ ಈ ಕೆಳಕಂಡ ಸೂತ್ರಗಳನ್ನು ಯೋಜನೆಯನ್ನು ತಯಾರಿಸುವುದಕ್ಕೆ ಉಪಯೋಗಿಸಿಕೊಳ್ಳುತ್ತಾರೆ.

(a)ಒಟ್ಟು ನಗರದ ವಿಸ್ತೀರ್ಣದಲ್ಲಿ ಸುಮಾರು ಶೇಕಡಾ ೪೦ರಿಂದ ೫೦ರಷ್ಟು ಭಾಗ ನೆಲವು ವಾಸದ ಮನೆಗಳ ಪ್ರದೇಶವಾಗಿದೆ.

(b)ಶೇಕಡಾ ೩೦ರಿಂದ ೪೦ರಷ್ಟು ಭಾಗ ನೆಲ ಒಟ್ಟು ನಗರದ ವಿಸ್ತೀರ್ಣದಲ್ಲಿ ರೋಡು ರಸ್ತೆಗಳಿಗಾಗಿ ಉಪಯೋಗವಾಗುತ್ತಿದೆ.

(c) ಒಟ್ಟು ನಗರದ ವಿಸ್ತೀರ್ಣದಲ್ಲಿ ಸುಮಾರು ಶೇಕಡಾ ೫ರಿಂದ ೧೦ ರಷ್ಟು ಭಾಗ ನೆಲವು ಆಟದ ಮೈದಾನಗಳಿಗೂ ಮತ್ತು ಉದ್ಯಾನವನಗಳಿಗೂ ಉಪಯೋಗವಾಗುತ್ತಿದೆ.

(d) ಒಟ್ಟು ನಗರದ ವಿಸ್ತೀರ್ಣದಲ್ಲಿ ಶೇಕಡಾ ೧೦ರಿಂದ ೧೫ರಷ್ಟು ಭಾಗ ನೆಲವನ್ನು ಸಾರ್ವಜನಿಕ ಕಟ್ಟಡಗಳಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ.

ನಗರಗಳ ಯೋಜನೆಗಳನ್ನು ತಯಾರಿಸುವಾಗ ಬರುವ ದೊಡ್ಡ ಸಮಸ್ಯೆಯೆಂದರೆ ಭೂಮಿಯ ಬೆಲೆ. ಸರ್ಕಾರಕ್ಕೆ ಬೇಕಾದ ಭೂಮಿಯೂ ಜನಗಳ ಅನುಕೂಲಕ್ಕೂ ಸಹಕಾರಿಯಾಗಿದ್ದರೆ ಅಂಥ ಭೂಮಿಯನ್ನು ಆಕ್ರಮಿಸಿಕೊಳ್ಳಲು ಕೊಡಬೇಕಾದ ಬೆಲೆ ಮಿತಿಮೀರುತ್ತದೆ. ಆದುದರಿಂದ ಸರ್ಕಾರದವರು ಕಾನೂನಿನ ಪ್ರಕಾರ ತಮಗೆ ಬೇಕಾದ ಭೂಮಿಯನ್ನು ಜನರಿಂದ ವಶಪಡಿಸಿಕೊಂಡು, ಮತ್ತೆ ಸೌಕರ್ಯಗಳ ಸಹಿತ ಜನರಿಗೆ ಹಂಚುವಾಗ ತಮ್ಮ ಯೋಜನೆಯಂತೆ ಅವರು ಗೃಹನಿರ್ಮಾಣ ಮಾಡುವುದನ್ನು ಕರಾರುವಾಕ್ಕಾಗಿ ಪಾಲಿಸುವಂತೆ ಮಾಡಬೇಕು.

ಪಟ್ಟಣಗಳನ್ನು ಕಟ್ಟುವಾಗ ಈ ಕೆಳಕಂಡ ಕೆಲವು ಸೂತ್ರಗಳನ್ನು ಅನುಸರಿಸಬೇಕು.

(೧) ಉತ್ತಮ ಮಧ್ಯಮ ವರ್ಗದ ಜನರಿರುವ ಕಡೆ ಅಂದರೆ "ಎ" ಮತ್ತು "ಬಿ" ಕ್ಲಾಸ್ ಮನೆಗಳಿರುವ ಕಡೆ ಒಂದು ಎಕರೆಯ ವಿಸ್ತೀರ್ಣಕ್ಕೆ ೧೦ ( ಹೆಕ್ಟೇರಿಗೆ ೨೫ ಮನೆ ) ಮನೆಗಳಿಗಿಂತ ಹೆಚ್ಚಿರಬಾರದು.

(೨) ತೃತೀಯ ವರ್ಗದ ಜನರು ಅಂದರೆ ಬಡ ಜನರು ವಾಸಿಸುವ ಕಡೆ ಎಕರೆಗೆ ೨೦ ಮನೆ (ಹೆಕ್ಟೇರಿಗೆ ೫೦ ಮನೆ) ಗಳಿಗಿಂತ ಹೆಚ್ಚಿರಬಾರದು.

(೩) ನಗರದಲ್ಲಿ ಅಂತಸ್ತುಗಳಿರುವ ಮಹಡಿ ಮನೆಗಳನ್ನು ನಿರ್ಮಾಣ ಮಾಡುವಾಗ, ವಾಸಕ್ಕೆ ಉಪಯೋಗಿಸುವ ಮಹಡಿ ಮನೆಯ ವಿಸ್ತಾರವು, ಮನೆಯನ್ನು ಕಟ್ಟಿರುವ ಭೂವಿಸ್ತೀರ್ಣದ (ಸೈಟಿನ) ಅರ್ಧಕ್ಕಿಂತ ಕಡಿಮೆ ಇರಬೇಕು.

(೪) ದೊಡ್ಡ ನಗರಗಳಲ್ಲಿ ಸೈಟಿನ ಬೆಲೆಯು ಬಹಳ ದುಬಾರಿ

ಯಾಗಿರುವುದರಿಂದ ಎತ್ತರವಾದ ಅಂತಸ್ತುಗಳುಳ್ಳ ಮಹಡಿ ಮನೆಗಳನ್ನು ಕಟ್ಟುವುದು ಅನಿವಾರ್ಯ. ಅಂತಹ ಸಮಯದಲ್ಲಿ ಆ ಕಟ್ಟಡದ ವಾಸಿಸುವ ಕೊಠಡಿಗಳ ಒಟ್ಟು ವಿಸ್ತೀರ್ಣವು, ಮನೆ ಕಟ್ಟಿರುವ ಸೈಟಿನ ವಿಸ್ತೀರ್ಣದ ೧/೨ಕ್ಕಿಂತಲೂ ಹೆಚ್ಚಿರಬಾರದು. ಮಹಡಿಗಳು ಹೆಚ್ಚಾದಂತೆಲ್ಲಾ, ಗಾಳಿ ಬೆಳಕುಗಳನ್ನು ವಾಸಿಸುವ ಕೊಠಡಿಗಳಿಗೆ ಒದಗಿಸುವ ಸಲುವಾಗಿ, ಮೇಲಿನ ಅಂತಸ್ತುಗಳ ವಿಸ್ತೀರ್ಣವನ್ನು ಕಡಿಮೆ ಮಾಡುತ್ತಾ ಹೋಗಬೇಕು. ಇದರಿಂದ ಗಾಳಿ ಬೆಳಕುಗಳ ಸಂಚಾರಕ್ಕೆ ತಕ್ಕಮಟ್ಟಿಗೆ ತಡೆ ಮತ್ತು ನಿರ್ಬಂಧತೆಗಳು ಕಡಮೆಯಾಗುತ್ತವೆ.

(೫) ಈ ಆಧುನಿಕ ಪ್ರಜಾಪ್ರಭುತ್ವದ ಕಾಲದಲ್ಲಿ ಬಹಳ ವಿಸ್ತಾರವಾದ ಕಾಂಪೋಂಡು ಇರುವ ಮನೆಗಳು ನಗರಗಳಲ್ಲಿರುವುದು ಸರಿಯಲ್ಲ. ಇವು ಹಿಂದೆ ಇದ್ದ ನಿರಂಕುಶ ಪ್ರಭುತ್ವದ ಕುರುಹುಗಳನ್ನು ತೋರಿಸುತ್ತವೆ. ಒಂದು ಕಡೆ ಜನರು ಬಹಳ ಒತ್ತಾದ ಕೊಳಕು ಪ್ರದೇಶಗಳಲ್ಲಿ ಇರುವುದು ಮತ್ತೊಂದು ಕಡೆ ದೊಡ್ಡ ಕಾಂಪೋಂಡುಗಳು ಇರುವ ಮನೆಗಳಲ್ಲಿ ಜನರು ವಾಸ ಮಾಡುವುದು, ಪ್ರಜಾಪ್ರಭುತ್ವ ತತ್ವಕ್ಕೆ ಅಕ್ಷಮ್ಯ ಅಪರಾಧ.

(೬) ಹೊಸದಾಗಿ ರಚಿಸುವ ಉಪನಗರಗಳಲ್ಲಿ ಎಕರೆಗೆ ೧೨೦ (ಹೆಕ್ಟೇರಿಗೆ ೩೦೦) ಜನರಿಗಿಂತ ಹೆಚ್ಚಾಗಿ ಜನರು ವಾಸಿಸಲು ಅವಕಾಶ ಕೊಡಕೂಡದು.

(೭) ಹಾಲೀ ಇರುವ ಪಟ್ಟಣಗಳಲ್ಲಿ ಕೊಳಕು ಪ್ರದೇಶಗಳನ್ನು ಕಡಿಮೆ ಮಾಡಬೇಕಾದರೆ, ನಮ್ಮ ಧ್ಯೇಯ ಅಥವಾ ನಿಯಮ ಎಕರೆಗೆ ೨೫೦ (ಹೆಕ್ಟೇರಿಗೆ ೬೨೫) ಜನರಿಗಿಂತ ಹೆಚ್ಚಿಗೆ ವಾಸ ಮಾಡಲು ಅವಕಾಶ ಕೊಡದಂತೆ ಇರಬೇಕು.

(೮) ನಗರಗಳ ಯೋಜನೆಗಳನ್ನು ತಯಾರಿಸುವಾಗ, ಅವುಗಳ ಮುಖ್ಯ ಬೀದಿಗಳು ಅಥವಾ ರಸ್ತೆಗಳು ಅಂದರೆ ಮೋಟಾರು ಮೊದಲಾದ ವಾಹನಗಳು ತಿರುಗಾಡುವ ರಸ್ತೆಗಳು ನೇರವಾಗಿಯೂ ನೀಳವಾಗಿಯೂ ಅಗಲವಾಗಿಯೂ ಇರಬೇಕು. ಇವುಗಳನ್ನು ಜನರು ವಾಸಮಾಡುವ ಮನೆಗಳ ಪ್ರದೇಶದಿಂದ ಬೇರ್ಪಡಿಸಿರಬೇಕು. ಇದರಿಂದ ಅಪಾಯಗಳು ಕಡಿಮೆಯಾಗುವುದಲ್ಲದೆ ವಾಹನಗಳು ಸರಾಗವಾಗಿ, ವೇಗವಾಗಿ ಓಡಾಡಲು ಅವಕಾಶವಿರುತ್ತದೆ.

(೯) ವಾಹನಗಳ ಓಡಾಟ ಹೆಚ್ಚಾಗಿರುವ ಕಡೆ ಲೆವಲ್ ಕ್ರಾಸಿಂಗ್‌ಗಳು ಇರಲೇಕೂಡದು.

(೧೦) ಬೀದಿಗಳ ಅಗಲವು, ಅವುಗಳ ಮೇಲೆ ಓಡಾಡುವ ಪಾದಚಾರಿಗಳ ಮತ್ತು ವಾಹನಗಳ ಸಂಖ್ಯೆಗನುಸಾರವಾಗಿ ವಿಶಾಲವಾಗಿರಬೇಕು. ರಾತ್ರಿಯ ಕಾಲದ ತಿರುಗಾಟಕ್ಕೆ ತಕ್ಕ ಬೆಳಕಿನ ವ್ಯವಸ್ಥೆ ಇರಬೇಕು.

(೧೧) ಮಲಮೂತ್ರ, ಗಲೀಜು, ಕಸಕಡ್ಡಿಗಳನ್ನು ಸಾಗಿಸಲು ಮಾತ್ರ ಇರುವ ಕನ್‌ಸರ್‌ವೆನ್ಸಿ ಗಲ್ಲಿಗಳನ್ನು ಆದಷ್ಟು ಮಟ್ಟಿಗೆ ರದ್ದುಮಾಡಬೇಕು. ಇವುಗಳ ಶುಚಿತ್ವವನ್ನು ಯಾರೂ ಗಮನಿಸದೆ ಅವುಗಳು ಕೊಳಕು ಪ್ರದೇಶಗಳಾಗಿ ನೊಣ ಸೊಳ್ಳೆ ಮೊದಲಾದವುಗಳ ಬೆಳವಣಿಗೆಗೆ ಸಹಕಾರಿಯಾಗುತ್ತವೆ.

(೧೨) ನಗರಗಳ ಯೋಜನೆಯನ್ನು ತಯಾರಿಸುವಾಗ, ಕಾರುಗಳು ನಿಲ್ಲುವ ಸ್ಥಳಗಳು, ಗಾಡಿ, ಬಸ್ಸು, ಟ್ರಾಮು ಮೊದಲಾದ ಜನರನ್ನು ಸಾಗಿಸುವ ವಾಹನಗಳು ನಿಲ್ಲುವುದಕ್ಕೆ ಸ್ಥಳಗಳು, ರೋಡ್ ಕ್ರಾಸಿಂಗ್‌ಗಳು ಪಾದಚಾರಿಗಳು ರಸ್ತೆಗೆ ಅಡ್ಡಬರುವ

ಸ್ಥಳಗಳು, ಪೆಟ್ರೋಲ್ ಪಂಪುಗಳನ್ನು ಇಡಬಹುದಾದ ಸ್ಥಳಗಳ ಮೊದಲಾದ ಪ್ರದೇಶಗಳನ್ನು ಮೊದಲೇ ಪರಿಗಣಿಸಿ ಯೋಜನೆಯನ್ನು ತಯಾರಿಸಬೇಕು.

(೧೩) ಕಕ್ಕಸ್ಸುಗಳನ್ನು ಜನರು ಹೆಚ್ಚಾಗಿ ಸೇರುವ ಕಡೆಗಳಲ್ಲೆಲ್ಲಾ ಒದಗಿಸಬೇಕು. ಅವು ಯಾವುವೆಂದರೆ ವಿಹಾರ ಮತ್ತು ವಿಶ್ರಾಂತಿಗಾಗಿ ಏರ್ಪಡಿಸಿರುವ ಉದ್ಯಾನವನಗಳು, ಮಾರ್ಕೆಟ್ಟುಗಳು, ಬಸ್‌ಸ್ಟಾಂಡ್‌ಗಳು ಮೊದಲಾದ ಪ್ರದೇಶಗಳು. ರಾತ್ರಿಕಾಲದಲ್ಲಿ ಮೇಲ್ಕಂಡ ಶೌಚಗೃಹಗಳಲ್ಲಿ ತಕ್ಕ ಬೆಳಕಿನ ವ್ಯವಸ್ಥೆ ಇರಬೇಕು.

(೧೪) ವಿಸ್ತಾರವಾಗಿ ಹರಡಿರುವ ಪಟ್ಟಣಗಳಲ್ಲಿ ನೀರು ಸರಬರಾಯಿ ವ್ಯವಸ್ಥೆ, ಕೊಳೆನೀರು ಮಳೆನೀರು ಮೊದಲಾದವುಗಳನ್ನು ಸಾಗಿಸಿ ವಿಸರ್ಜಿಸುವ ವ್ಯವಸ್ಥೆ, ರಾತ್ರಿಯಲ್ಲಿ ದೀಪಗಳನ್ನು ಬೆಳಗಿಸುವ ಖರ್ಚು, ಕಸಕಡ್ಡಿಗಳನ್ನು ಶೇಖರಿಸಿ ಸಾಗಿಸಿ ವಿಸರ್ಜಿಸುವ ವ್ಯವಸ್ಥೆ ಮೊದಲಾದುವನ್ನು ಸಮರ್ಪಕವಾಗಿ ಏರ್ಪಡಿಸಬೇಕಾದರೆ ಬಹಳ ವೆಚ್ಚವಾಗುತ್ತದೆ. ಆದುದರಿಂದ ಪಟ್ಟಣವು ಅಚ್ಚುಕಟ್ಟಾಗಿ, ಆದಷ್ಟು ಮಟ್ಟಿಗೆ ಚಿಕ್ಕದಾಗಿರಬೇಕು.

(೧೫) ಪ್ರತಿಯೊಂದು ಉಪನಗರವೂ ಸ್ವತಂತ್ರವಾಗಿ ದಿನಂಪ್ರತಿ ಸೌಕರ್ಯಗಳನ್ನು ಒಳಗೊಂಡಿರಬೇಕು:—

(a) ಉಪನಗರದಲ್ಲಿ ವಾಸಿಸುವ ಪ್ರತಿ ನಾನ್ನೂರು ಜನರಿಗೆ ಒಂದರಂತೆ ಅಂಗಡಿಗಳ ಸಾಲು ಪ್ರತಿ ಉಪನಗರದಲ್ಲಿಯೂ ಇರಬೇಕು.

(b) ಪ್ರತಿ ಉಪನಗರವೂ ಅಲ್ಲಿ ವಾಸಿಸುವ ಜನಗಳ ಮಕ್ಕಳಿಗೆ ಅವಶ್ಯಕವಾದ ಸ್ಕೂಲುಗಳು, ಪಾಠಶಾಲೆಗಳು, ಕ್ಲಬ್ಬುಗಳು,

ಉದ್ಯಾನವನಗಳು, ಆಟದ ಮೈದಾನಗಳು, ಸಣ್ಣ ಪುಟ್ಟ ಕೈಗಾರಿಕೆಗಳು ಮೊದಲಾದುವುಗಳನ್ನು ಒಳಗೊಂಡಿರಬೇಕು.

(c) ಪ್ರತಿ ಉಪನಗರದಲ್ಲಿಯೂ ಒಂದು ಸಣ್ಣ ಆರೋಗ್ಯ ಇಲಾಖೆ, ಒಂದು ಆಸ್ಪತ್ರೆ, ಒಂದು ಪೋಸ್ಟ್ ಆಫೀಸು, ಒಂದು ಪೋಲಿಸ್ ಸ್ಟೇಷನ್ ಮೊದಲಾದ ಜನರಿಗೆ ಬಹು ಅವಶ್ಯಕವಾದ ಸರ್ಕಾರಿ ಆಫೀಸುಗಳು ಮತ್ತು ಸೌಕರ್ಯಗಳು, ಆ ಉಪನಗರದಲ್ಲಿರುವ ಜನಸಂಖ್ಯೆಯನ್ನು ಅನುಸರಿಸಿ ವಿಶಾಲವಾಗಿರಬೇಕು.

(d) ಪ್ರತಿ ಉಪನಗರದಲ್ಲಿಯೂ ದೇವರನ್ನು ಧ್ಯಾನಿಸಲು ಅಥವಾ ಪೂಜಿಸಲು ದೇವಸ್ಥಾನಗಳು ಇರಬೇಕು.

(e) ಆ ಉಪನಗರದ ಜನರು ಸತ್ತರೆ ಅಲ್ಲಿಯೇ ಹೂಳುವುದಕ್ಕೋ ಅಥವಾ ಸುಡುವುದಕ್ಕೋ ಅನುಕೂಲವಾದ ಸ್ಮಶಾನಗಳಿರಬೇಕು.

(f) ಉಪನಗರವೇನಾದರೂ ಮುನಿಸಿಪಲ್ ಎಲ್ಲೆಯಿಂದ ಹೊರಗಿದ್ದರೆ, ಅಂತಹ ಉಪನಗರದಲ್ಲಿನ ಒಳಚರಂಡಿ ವ್ಯವಸ್ಥೆ, ಮಲಮೂತ್ರಗಳ ವಿಸರ್ಜನೆ, ಕಸಕಡ್ಡಿಗಳನ್ನು ಅಗೇವುಗಳಲ್ಲಿ ಹಾಕುವ ವ್ಯವಸ್ಥೆ ಅಥವಾ ಸುಡುವ ವ್ಯವಸ್ಥೆ ಮೊದಲಾದವನ್ನು ಸ್ವತಂತ್ರವಾಗಿರಿಸಲು ಬೇಕಾದ ಏರ್ಪಾಡುಗಳನ್ನು ಯೋಜನೆ ತಯಾರಿಸುವಾಗ ಮೊದಲೇ ಸೇರಿಸಬೇಕು.

(೧೬) ಪ್ರಜಾ ಸೌಲಭ್ಯ ವನ್ನು ಒದಗಿಸಿಕೊಡುವ ಸಂಸ್ಥೆಯು ಪ್ರತಿ ಉಪನಗರದಲ್ಲಿಯೂ ಅದರ ಮಧ್ಯ ಭಾಗದಲ್ಲಿರುವಂತೆ ಮಿಕ್ಕ ವ್ಯವಸ್ಥೆಗಳನ್ನು ಅಳವಡಿಸಬೇಕು. ಹಿಂದಿನ ಕಾಲದಲ್ಲಿ ದೇವರಿಗೆ ಮತ್ತು ದೇವಸ್ಥಾನಕ್ಕೆ ಬಹಳ ಪ್ರಾಮುಖ್ಯತೆ ಇದ್ದುದ

ರಿಂದ ನಮ್ಮ ಪೂರ್ವಿಕರು ಕಟ್ಟಿರುವ ಪಟ್ಟಣಗಳಲ್ಲಿ ದೇವಸ್ಥಾನ ವನ್ನು ಊರಿನ ಮಧ್ಯಭಾಗದಲ್ಲಿ ಕಾಣಬಹುದು.

(೧೭) ಪಟ್ಟಣ ಅಥವಾ ನಗರಗಳನ್ನು ನಿರ್ಮಾಣ ಮಾಡುವ ಯೋಜನೆಯನ್ನು ತಯಾರಿಸುವಾಗ ಜನರು ವಾಸಮಾಡುವ ಪ್ರದೇಶಗಳನ್ನು ಮತ್ತು ವಾಣಿಜ್ಯ ಕೇಂದ್ರ ಗಳನ್ನು ಕೈಗಾರಿಕಾ ಕೇಂದ್ರಗಳಿಂದ, ಭಾರಿ ಸಾಮಾನು ಸಾಗಾಣಿಕೆ ಕೇಂದ್ರ ಮತ್ತು ಅವುಗಳನ್ನು ಶೇಖರಿಸಿ ಇಡುವ ಗೋಡೌನ್‌ಗಳಿಂದ, ಮತ್ತು ಅಪಾಯಕಾರಿಯಾದ ಅಥವಾ ಜನರ ಆರೋಗ್ಯ ಘಾತಕವಾದ ಕೈಗಾರಿಕಾ ಕೇಂದ್ರಗಳಿಂದ ಬೇರ್ಪಡಿಸಬೇಕು. ಈ ರೀತಿ ಯಾಗಿ ನಗರವನ್ನು ವಿಭಾಗಿಸುವುದರಿಂದ ಅನೇಕ ಪ್ರಯೋಜನ ಗಳಿವೆ. ನಗರದ ಮಧ್ಯಭಾಗದಲ್ಲಿ ಹೆಚ್ಚು ಜನಸಂಖ್ಯೆಯಿರ ಬೇಕು. ನಗರದ ಅಂಚು ಮುಟ್ಟಿದಂತೆಲ್ಲಾ ಜನಸಂಖ್ಯೆ ಕಡಮೆ ಯಾಗುತ್ತಾ ಹೋಗಬೇಕು. ಊರಿನ ಮುನಿಸಿಪಲ್ ಎಲ್ಲೆ ಯಿಂದ ಆಚೆ ಊರಿನ ಸುತ್ತಲೂ ಹಸಿರಿನ ಗಿಡಗಳನ್ನು ಬೆಳೆಸ ಬೇಕು. ಹಿಂದಿನ ಕಾಲದಲ್ಲಿ ಪಟ್ಟಣವನ್ನು ಕಟ್ಟಬೇಕಾದರೆ ಜಾತಿವಾರು ವಾಸಿಸುವಂತೆ ಕಟ್ಟುತ್ತಿದ್ದರು. ಆದರೆ ಈಗ ಜಾತಿ ವಾರು ಭಾವನೆಯನ್ನು ತೊಡೆದು ಹಾಕಿರುವುದು ಒಳ್ಳೆಯದು. ನಮ್ಮ ದೇಶದಲ್ಲಿ ಪ್ರತಿಯೊಂದು ವಾಸಿಸುವ ಪ್ರದೇಶದಲ್ಲೂ ಎಲ್ಲಾ ಜಾತಿಯವರೂ ಕೂಡಿ ಬಾಳುವಂತೆ ಯೋಜನೆಗಳನ್ನು ತಯಾರಿಸಬೇಕು.

(೧೮) ಈಗ ಹೊಸದಾಗಿ ಕಟ್ಟಬೇಕಾಗಿರುವ ಪಟ್ಟಣಗಳ ಜನಸಂಖ್ಯೆಯು ಪ್ರತಿ ಪಟ್ಟಣದಲ್ಲಿಯೂ ಒಂದು ಲಕ್ಷಕ್ಕಿಂತ ಹೆಚ್ಚಿರದಂತೆ ಯೋಜನೆಯನ್ನು ತಯಾರಿಸ ಬೇಕು. ಆದರೆ ಈ

ರೀತಿ ಮಾಡಲು ಸಾಧ್ಯವಾಗುವ ಯೋಜನೆಗಳು ಬಹಳ ಕಡಿಮೆ. ಅಲ್ಲದೆ ಹೆಚ್ಚು ಜನರಿರುವ ಪಟ್ಟಣಗಳ ಜನಸಂಖ್ಯೆಯನ್ನು ಕಡಿಮೆ ಮಾಡುವುದಂತೂ ಅಸಾಧ್ಯವಾದ ಕೆಲಸವೇ ಸರಿ.

(೧೯) ಪಟ್ಟಣಗಳನ್ನು ಮುಖ್ಯ ರಸ್ತೆಯ ಎರಡು ಕಡೆಗಳಲ್ಲಿ ಮಾತ್ರ ಉದ್ದವಾದ ಟೇಪಿನಂತೆ ಬೆಳೆಯಲು ಅವಕಾಶ ಕೊಡ ಬಾರದು.

(೨೦) ಪಟ್ಟಣಗಳನ್ನು ವರ್ತುಲಾಕಾರವಾಗಿಯೋ, ಚಚ್ಚೌಕ ವಾಗಿಯೋ ಅಥವಾ ಉದ್ಯಾನವನಗಳ ಮಾದರಿಯಲ್ಲೋ ಕಟ್ಟ ಬೇಕಾದ ನಗರದ ಅವಶ್ಯಕತೆ ಮತ್ತು ಸೌಕರ್ಯಗಳನ್ನು ನೋಡಿ ಕೊಂಡು ನಿರ್ಮಾಣಮಾಡಬೇಕು.

## ಹಳ್ಳಿಗಳನ್ನು ಕಟ್ಟಬೇಕಾದಾಗ ಮುಖ್ಯವಾಗಿ ಗಮನಿಸಬೇಕಾದ ಕೆಲವು ನಿಯಮಗಳು

ಇಂಡಿಯಾ ದೇಶವು ಬಹಳ ಮಟ್ಟಿಗೆ ಹಳ್ಳಿಗಳಿಂದ ಕೂಡಿದ ದೇಶ. ಸುಮಾರು ಶೇಕಡಾ ೮೩ ಭಾಗ ಜನರು ಹಳ್ಳಿಗಳಲ್ಲಿ ವಾಸಮಾಡುತ್ತಾರೆ. ರೈತನೇ ದೇಶದ ಬೆನ್ನೆಲಬು. ರೈತ ಉದ್ಧಾರವಾಗದೇ ದೇಶದ ಉದ್ಧಾರವಿಲ್ಲ ಎಂಬುದನ್ನು ಜನರು ಹೇಳುವುದನ್ನೂ ಮತ್ತು ಪತ್ರಿಕೆಗಳಲ್ಲಿ ಬರುವುದನ್ನೂ ನಾವು ನೋಡುತ್ತಲಿದ್ದೇವೆ.

ಆದರೆ ಹೊಸ ಹೊಸ ಪಟ್ಟಣಗಳನ್ನೂ ನಗರಗಳನ್ನೂ ಉ ನಗರಗಳನ್ನೂ ವಿಜ್ಞಾನ ರೀತಿ ನಿರ್ಮಾಣ ಮಾಡುವುದನ್ನು ಕಂ ದ್ದೇವೆ ಮತ್ತು ಕೇಳಿದ್ದೇವೆಯೋ ಹೊರತು, ಹಳ್ಳಿಗಳನ್ನು ಆಧು ನಿಕ ವಿಜ್ಞಾನದ ರೀತಿ ನಿರ್ಮಾಣಮಾಡುವುದನ್ನು ನೋಡಿಯ

ಇಲ್ಲ ಮತ್ತು ಕೇಳಿಯೂ ಇಲ್ಲ. ಇದಕ್ಕೆ ಕಾರಣವೇನೋ ತಿಳಿಯದು. ದೇಶದ ಸಂಪತ್ತು ಹಳ್ಳಿಗಳ ನಿರ್ಮಾಣಕ್ಕೆ ಖರ್ಚು ಮಾಡುವಷ್ಟು ಇಲ್ಲದೇ ಇರುವುದರಿಂದಲೋ ಅಥವಾ ಹಳ್ಳಿಯ ಜನರಿಗೆ ಆಧುನಿಕ ವಿಜ್ಞಾನದ ಮಾದರಿಯಲ್ಲಿ ಕಟ್ಟಿದ ಹಳ್ಳಿಗಳಲ್ಲಿ ವಾಸಮಾಡುವ ಅಪೇಕ್ಷೆ ಇಲ್ಲದೇ ಇರುವುದರಿಂದಲೋ ಇರಬಹುದು.

ಮಲೇರಿಯಾ ಮೊದಲಾದ ಸಾಂಕ್ರಾಮಿಕ ರೋಗಗಳು ಬಂದಾಗಲೋ, ನದಿಪ್ರವಾಹವು ಬಂದು ಹಳ್ಳಿಗಳು ಮುಳುಗಿ ಹೋದಾಗಲೋ, ಜಲಪ್ರವಾಹವನ್ನು ತಡೆದು ಕೆರೆಕಟ್ಟೆ ಮೊದಲಾದ ಜಲಾಶಯಗಳನ್ನು ಕಟ್ಟಿ ಅದರ ಹಿಂದೆ ಇರುವ ಹಳ್ಳಿಗಳು ಮುಳುಗಿ ಹೋದಾಗಲೋ, ನಮ್ಮಲ್ಲಿ ಹೊಸ ಹಳ್ಳಿಗಳನ್ನು ಕಟ್ಟುವ ಯೋಗ ಬರಬಹುದು.

ಹಳ್ಳಿಗಳು ಇಂಡಿಯಾ ದೇಶದ ವಿವಿಧ ಭಾಗಗಳಲ್ಲಿ ವಿವಿಧ ರೀತಿಯಾಗಿವೆ. ಇಂಡಿಯಾ ದೇಶದ ಹಳ್ಳಿಗಳನ್ನು ವೀಕ್ಷಿಸಿದರೆ ಮದರಾಸು ಮತ್ತು ಮೈಸೂರಿನ ಹಳ್ಳಿಗಳೇ ಒಂದು ರೀತಿ ಸುಧಾರಿತ ಮತ್ತು ಯೋಜನೆಗಳಿಂದ ವಿಂಗಡಿಸಿದಂತಿವೆ. ಇವು ಉತ್ತರ ದೇಶಗಳವರು ಅನಸರಿಸಲು ಮಾದರಿಯಾಗಿವೆ.

ಒಟ್ಟನಲ್ಲಿ, ಕೆಲವು ಹಳ್ಳಿಗಳಲ್ಲಿ ಶುದ್ಧವಾದ ಕುಡಿಯುವ ನೀರು ದೊರಕುತ್ತದೆ. ಆದರೆ ಯಾವ ಹಳ್ಳಿಯಲ್ಲೂ ಮಲಮೂತ್ರಗಳನ್ನು ಸರಿಯಾದ ಆರೋಗ್ಯನಿಯಮಗಳನ್ನು ಅನುಸರಿಸಿದ ರೀತಿಯಲ್ಲಿ ಶೇಖರಿಸಿ, ಸಾಗಿಸಿ, ವಿಸರ್ಜನೆ ಮಾಡುವ ವ್ಯವಸ್ಥೆ ಇಲ್ಲ. ದೊಡ್ಡ ದೊಡ್ಡ ಮನೆಗಳಲ್ಲೂ ಕಿಟಕಿಗಳನ್ನು ನೋಡುವುದೇ ಅಪರೂಪ. ಜನರು ದನಕುರಿಗಳ ಹತ್ತಿರದಲ್ಲೇ ವಾಸಮಾಡು

ತ್ತಾರೆ. ಹುಳುಹುಪ್ಪಟೆಗಳಂತೂ ಮನೆಯಲ್ಲಿ ಬಹಳವಾಗಿರುತ್ತವೆ.

ಹಳ್ಳಿಯ ಜನರು ಬಡವರು. ಅವರ ಕೆಲಸಕಾರ್ಯ, ಜೀವನದ ರೀತಿ ನೀತಿ ಮತ್ತು ವಾಸಿಸುವ ವಾತಾವರಣಗಳನ್ನು ಬದಲಾಯಿ ಸುವುದು ಬಹಳ ಪ್ರಯಾಸಕರವಾದ ವಿಷಯ. ಅವರನ್ನು ಹೊಸ ಹಳ್ಳಿ ಮತ್ತು ಹೊಸಮನೆಗಳಿಗೆ ಹೋಗುವಂತೆ ಮಾಡು ವುದು ಬಹಳ ಕಷ್ಟಕರವಾದ ಕೆಲಸ. ಅಲ್ಲದೆ ಅವರು ಇಷ್ಟ ಪಟ್ಟರೂ, ತಮ್ಮ ಹಳೆಯ ಮನೆಗಳನ್ನು ಬಿಟ್ಟು ಹೊಸಮನೆ ಗಳನ್ನು ಕಟ್ಟಿಕೊಳ್ಳುವುದಕ್ಕೆ ಅವರಿಗೆ ಹಣದ ಕೊರತೆ ಇದೆ. ಆದುದರಿಂದ ಸದ್ಯಕ್ಕೆ ಹೊಸಹಳ್ಳಿಗಳನ್ನು ನಿರ್ಮಾಣ ಮಾಡುವ ಯೋಜನೆಯನ್ನು ತೆಗೆದುಕೊಳ್ಳದೇ ಇದ್ದರೂ, ಈ ಕೆಳಕಂಡ ಸೌಕರ್ಯಗಳನ್ನು ಕೊಟ್ಟು, ಹಳ್ಳಿಯ ಜನರು ತಮ್ಮ ಹಳ್ಳಿಯ ವಿಷಯವಾಗಿ ಈ ಕೆಳಗೆ ಕಂಡ ಕೆಲವು ಸೂತ್ರಗಳನ್ನು ನೈರ್ಮಲ್ಯ ತೆಗಾಗಿ ಮಾಡಿದರೆ ಸಾಕಾಗಿದೆ. ಅವು ಯಾವುವೆಂದರೆ:—

(೧) ಹೆದ್ದಾರಿಯಿಂದ ಹಳ್ಳಿಗಳಿಗೆ ರಸ್ತೆ ಇಲ್ಲದ ಕಡೆ ರಸ್ತೆ ಗಳನ್ನುಮಾಡಬೇಕು.

(೨) ಶುದ್ಧವಾದ ಕುಡಿಯುವ ನೀರು ಪ್ರತಿಹಳ್ಳಿಯಲ್ಲಿಯೂ ದೊರಕುವಂತೆ ಮಾಡಬೇಕು.

(೩) ದನಕರುಗಳ ಮೇವಿಗೆ ಹಲ್ಲುಗಾವಲುಗಳನ್ನು ಏರ್ಪಡಿಸ ಬೇಕು.

(೪) ಹಳ್ಳಿಯ ಜನರನ್ನು ಅವರ ಮನೆಗಳಿಗೆ ಕಿಟಕಿಗಳನ್ನು ಇಟ್ಟು ಅವುಗಳನ್ನು ಸದಾ ತೆರೆದಿರುವಂತೆ ಪ್ರೋತ್ಸಾಹಿಸಬೇಕು.

(೫) ದನಕರುಗಳಿಗೋಸ್ಕರ ಬೇರೆ ದನದ ಕೊಟ್ಟಿಗೆಯನ್ನು ಮನೆಯ ಹಿಂದುಗಡೆ ಮಾಡಿ ಅವುಗಳ ಸಂಪರ್ಕದಲ್ಲಿ ಸದಾ

ಮನೆಯ ಜನರು ಇರದಂತೆ ರೈತರನ್ನು ಸರ್ಕಾರವು ಕೇಳಿಕೊಳ್ಳಬೇಕು.

(೬) ಪ್ರತಿಯೊಂದು ಮನೆಯಲ್ಲಿಯೂ ಶುಚಿಯಾದ ಒಂದು ಅಗೇವು ಕಕ್ಕಸನ್ನು ಇಟ್ಟು ಆರೋಗ್ಯವನ್ನು ಸುಧಾರಿಸಿಕೊಳ್ಳುವಂತೆ ರೈತರಿಗೆ ತಿಳಿವಳಿಕೆ ಕೊಡಬೇಕು.

(೭) ಹಳ್ಳಿಯ ಪಾಠಶಾಲೆ ಒಂದು ಎತ್ತರವಾದ ತೇವರಹಿತವಾದ ಒಳ್ಳೆಯ ಸ್ಥಳದಲ್ಲಿ ಇದ್ದು ಅದರ ಸುತ್ತಲೂ ಆಟದ ಮೈದಾನವಿರಬೇಕು ಮತ್ತು ಪಾಠಶಾಲೆಯ ಆವರಣವು ಶುಚಿಯಾಗಿರಬೇಕು.

(೮) ಸರ್ಕಾರದವರು ಆಧುನಿಕ ವಿಜ್ಞಾನದ ರೀತಿಯಲ್ಲಿ ಮಾದರಿ ಮನೆಗಳನ್ನು ಒಂದೊಂದನ್ನಾದರೂ ಪ್ರತಿ ಹಳ್ಳಿಯಲ್ಲಿ ಕಟ್ಟಿ, ಅದರ ಉಪಯೋಗಗಳನ್ನು ಹಳ್ಳಿಯ ಜನರಿಗೆ ಚೆನ್ನಾಗಿ ಮನದಟ್ಟಾಗುವಂತೆ ವಿವರಿಸಿ, ಹಳ್ಳಿಯ ಜನರು ಆ ರೀತಿಯ ಮಾದರಿ ಮನೆಗಳನ್ನು ತಾವೂ ಕಟ್ಟುವಂತೆ ಪ್ರೋತ್ಸಾಹಿಸಬೇಕು.

(೯) ಸರ್ಕಾರದವರೇ ಹಳ್ಳಿಗಳನ್ನು ಕಟ್ಟುವ ಅವಕಾಶ ಸಿಕ್ಕಿದರೆ ಆಗ,

(a) ಒಂದು ಎಕರೆಗೆ ೭೦ ಜನರಿಗಿಂತ ಹೆಚ್ಚಿಗೆ (೧ ಹೆಕ್ಟೇರಿಗೆ ೧೮೦ ಜನರು) ವಾಸಿಸದಂತೆ ಯೋಜನೆಯನ್ನು ತಯಾರಿಸಬೇಕು.

(b) ಶುದ್ಧವಾದ ಕುಡಿಯುವ ನೀರಿನ ಸರಬರಾಜು ಮಾಡಬೇಕು.

(c) ರಸ್ತೆಗಳನ್ನು ನಿರ್ಮಿಸಿ ಮನೆಗಳು ರಸ್ತೆಯ ಎರಡು

ಕಡೆಗೂ ಸಾಲಾಗಿ ಇರುವಂತೆ ಯೋಜನೆಯನ್ನು ತಯಾರಿಸ ಬೇಕು.

(d) ಜನರು ಸಂತೆ; ಜಾತ್ರೆ; ರೇಡಿಯೋ; ಪೂಜೆ ಮೊದಲಾದುವುಗಳಿಗೆ ಸೇರುವುದಕ್ಕೆ ಹಳ್ಳಿಯ ಹೊರಗೆ ಸ್ಥಳವನ್ನೇರ್ಪಡಿಸ ಬೇಕು.

(e) ಹಳ್ಳಿಯಲ್ಲಿ ಸ್ವಲ್ಪ ಭಾಗವನ್ನು ಬಡಗಿಗಳಿಗೂ ಕಮ್ಮಾರರಿಗೂ ನೆಯ್ಗೆಯವರಿಗೂ ಕುಂಬಾರ ಮೊದಲಾದ ಪುಟ್ಟ ಗೃಹ ಕೈಗಾರಿಕೆಗಳನ್ನು ನಡೆಸುವ ಜನರಿಗೂ ಮೀಸಲಾಗಿಡಬೇಕು.

(f) ಸರ್ಕಾರ ಕಟ್ಟುವ ಮಾದರಿ ಮನೆಯಲ್ಲಿ ಚೆನ್ನಾಗಿ ಗಾಳಿ ಬೆಳಕು ಇರುವ ಎರಡು ಕೊಠಡಿಗಳು, ಒಂದು ಸೌಕರ್ಯಯುತವಾದ ಅಡಿಗೆಮನೆ, ಒಂದು ಆರೋಗ್ಯ ನಿಯಮಗಳನ್ನು ಅನುಸರಿಸಿ ಕಟ್ಟಿರುವ ಕಕ್ಕಸು, ಮನೆಯ ಹಿಂಭಾಗಡೆ ದನಕರುಗಳನ್ನು ಕಟ್ಟುವುದಕ್ಕೆ ಸ್ಥಳ, ಗೊಬ್ಬರದ ಗುಂಡಿ ಮೊದಲಾದುವು ಇರುವಂತೆ ಮನೆಯನ್ನು ನಿರ್ಮಾಣ ಮಾಡಬೇಕು. ಇದಲ್ಲದೆ ಮನೆ ಕಟ್ಟಲು ಬೇಕಾದ ಸಾಮಾನುಗಳು ಆ ಹಳ್ಳಿಯಲ್ಲೇ ದೊರಕುವಂತೆ ಇದ್ದು, ಹೆಚ್ಚು ಬೆಲೆಯಿಲ್ಲದ್ದಾಗಿಯೂ ಇರಬೇಕು. ಒಟ್ಟಿನಲ್ಲಿ ಮನೆ ಕಟ್ಟದ ಖರ್ಚು ಕಡಿಮೆಯಾಗಬೇಕು. ಇಂತಹ ಮಾದರಿ ಮನೆಗಳನ್ನು ಆ ಹಳ್ಳಿಯ ಉಪಾಧ್ಯಾಯರಿಗೋ ಅಥವಾ ಸೂಲಗಿತ್ತಿಗೋ ಕೊಡಬೇಕು. ಏಕೆಂದರೆ ಇವರ ಸೇವೆ ಹಳ್ಳಿಯವರೆಲ್ಲರಿಗೂ ಬಹಳ ಮುಖ್ಯವಾದುದು. ಈ ಯೋಜನೆಯಲ್ಲಿ ಜನಾರೋಗ್ಯ ಇಂಜಿನಿಯರ್ ಅಥವಾ ಶಿಲ್ಪಿಯ ಸೇವೆಯನ್ನು ಅವಶ್ಯಕವಾಗಿ ಉಪಯೋಗಿಸಿಕೊಳ್ಳಬೇಕು.

## ೪. ನೀರು ಸರಬರಾಜು

ಪ್ರಪಂಚದಲ್ಲಿ ಪ್ರಾಣಿಗಳು ಬದುಕಬೇಕಾದರೆ ಗಾಳಿ ಆಹಾರ ಮತ್ತು ನೀರು ಬಹಳ ಮುಖ್ಯವಾದುವು. ಇವುಗಳಿಲ್ಲದೆ ಯಾರೂ ಬದುಕುವಂತೆಯೇ ಇಲ್ಲ. ಆದುದರಿಂದ ನೀರಿನ ಪ್ರಾಮುಖ್ಯತೆ ಯನ್ನು ಗಮನಿಸಬಹುದು. ನೀರಿಲ್ಲದೆ ೨-೩ ದಿವಸಗಳೂ ಇರಲು ಸಾಧ್ಯವಿಲ್ಲ. ಆದರೆ ಸಿಕ್ಕಿದ ನೀರನ್ನು ಮನುಷ್ಯನು ಕುಡಿದು ಆರೋಗ್ಯವಂತನಾಗಿರಲು ಸಾಧ್ಯವಿಲ್ಲ ಅದರಲ್ಲಿಯೂ ಈಗಿನ ಆಧುನಿಕ ಪ್ರಪಂಚದಲ್ಲಿ ಇರಲು ಸಾಧ್ಯವೇ ಇಲ್ಲ. ಇದಲ್ಲದೆ ಈಗಿನ ಆಧುನಿಕ ಮಾನವನಿಗೆ ಕುಡಿಯುವ ನೀರಿಗಿಂತ ಹೆಚ್ಚಾಗಿ ಅಡಿಗೆ ಮತ್ತು ಸ್ನಾನ ಮಾಡುವುದಕ್ಕೂ ಪಾತ್ರೆ ಮೊದಲಾದವು ಗಳನ್ನು ತೊಳೆಯುವುದಕ್ಕೂ ಮತ್ತು ಇನ್ನೂ ಅನೇಕ ಕಾರ್ಯ ಗಳಿಗೂ ನೀರು ಆವಶ್ಯಕವಾಗಿ ಬೇಕಾಗಿದೆ. ಒಂದು ದೇಶದ ಜನ ಜೀವನದ ಮಟ್ಟವನ್ನು ಆ ದೇಶದ ಜನರು ಉಪಯೋಗಿಸುವ ನೀರಿನ ವೆಚ್ಚದಿಂದಲೂ ಅಳೆಯಬಹುದು. ಸಾಕಷ್ಟು ಒಳ್ಳೆಯ ಶುದ್ಧವಾದ ನೀರು ಜನರಿಗೆ ಒದಗಿಸುವುದರಿಂದ ಅವರು ಆರೋಗ್ಯ ವಂತರಾಗಿರುವಂತೆಯೂ, ಮತ್ತು ಶುಚಿಯಾಗಿರುವಂತೆಯೂ ಮಾಡಬಹುದು.

ಇಂಡಿಯಾದಲ್ಲಿರುವ ಪಟ್ಟಣಗಳ ಪೈಕಿ ಕೇವಲ ಶೇಕಡ ೧೬ ಪಟ್ಟಣಗಳಿಗೆ ಮಾತ್ರ ಶುದ್ಧವಾದ ನೀರಿನ ಸರಬರಾಜು ಇದೆ. ಅಂದರೆ ಇಂಡಿಯಾ ದೇಶದ ಒಟ್ಟು ಜನರ ಶೇಕಡಾ ೬.೧೫ ಭಾಗ ಅಥವಾ ಪಟ್ಟಣಗಳಲ್ಲಿರುವ ಜನಸಂಖ್ಯೆಯ ಶೇಕಡಾ ೪೪.೫ ಭಾಗ ಜನರಿಗೆ ಮಾತ್ರ ಶುದ್ಧವಾದ ನೀರಿನ ಉಪಯೋಗ ದೊರೆ

ಯುತ್ತಿದೆ. ನೀರು ಸರಬರಾಜು ಪ್ರತಿ ಮನುಷ್ಯನಿಗೆ ದಿನಂಪ್ರತಿ ೨ ಗಾಲನ್ನಿನಿಂದ ೪೦ ಗ್ಯಾಲನ್‌ವರೆಗೂ ಸರಬರಾಜು ಆಗುತ್ತಿದೆ. ನೀರನ್ನು ಕೆಲವು ಗಂಟೆಗಳ ಕಾಲ ಮಾತ್ರ ನಲ್ಲಿಗಳಲ್ಲಿ ಬಿಡುತ್ತಾರೆ. ಬಹುಮಟ್ಟಿಗೆ ಎಲ್ಲಾ ನೀರು ಸರಬರಾಜು ಕೇಂದ್ರಗಳಲ್ಲಿಯೂ, ನೀರು ಶೋಧಿಸುವ ಯಂತ್ರಗಳು ಇದ್ದಾಗ್ಯೂ, ಅವುಗಳನ್ನು ನೋಡಿಕೊಳ್ಳುವ ಮೇಲ್ವಿಚಾರಣೆ ಸಮರ್ಪಕವಾಗಿಲ್ಲ. ಅಲ್ಲದೆ, ಯಂತ್ರಗಳನ್ನು ನೋಡಿಕೊಳ್ಳುವವರಿಗೆ ನೀರನ್ನು ಶೋಧಿಸುವುದರ ಗುರುತರ ಜವಾಬ್ದಾರಿ ತಿಳಿದಿಲ್ಲ. ಪ್ರತಿಯೊಂದು ನೀರು ಶೋಧ ನಾಲಯಕ್ಕೂ ಒಂದು ಲ್ಯಾಬೋರೇಟರಿ ಇರಬೇಕಾದುದು ಅವಶ್ಯಕ.

ಕಳೆದ ಇಪ್ಪತ್ತು ವರ್ಷಗಳಿಂದ ಪಟ್ಟಣಗಳು ಬಹಳ ಜಾಗ್ರತೆ ಬೆಳೆದಿರುವುದರಿಂದ, ಹಿಂದೆ ಮಾಡಿದ್ದ ನೀರು ಸರಬರಾಜು ಯೋಜನೆಗಳೆಲ್ಲಾ ಬಹಳ ಅಸಮರ್ಪಕ ಸ್ಥಿತಿಯಲ್ಲಿವೆ. ನೀರನ್ನು ಶೋಧಿಸುವ ಹೊಸ ಯಂತ್ರಗಳನ್ನು ಕೊಳ್ಳಲು ಮುನಿಸಿಪಾಲಿಟಿ ಗಳಲ್ಲಿ ಹಣವಿಲ್ಲದೆ ಮತ್ತು ಇರುವ ಹಳೆಯ ಯಂತ್ರಗಳು ಸರಿ ಯಾಗಿ ಕೆಲಸ ಮಾಡದೆ ನಿರುಪಯೋಗಿಗಳಾಗಿವೆ. ಕೆಲವು ಪಟ್ಟಣಗಳಲ್ಲಿ ನೀರನ್ನು ಶೋಧಿಸಲು ಬೇಕಾಗುವ ರಾಸಾಯನಿಕ ಪದಾರ್ಥಗಳು ಸಿಗದೆ ನೀರಿನ ಗುಣವು ಅಷ್ಟು ಚೆನ್ನಾಗಿಲ್ಲ. ಆದು ದರಿಂದ ನೀರು ಸರಬರಾಜು ವ್ಯವಸ್ಥೆಯನ್ನು ಜನಾರೋಗ್ಯ ಇಂಜಿ ನಿಯರ್ ಅಥವಾ ಶಿಲ್ಪಿಗೆ ವಹಿಸಬೇಕು. ಇಂಡಿಯಾ ದೇಶ ದಲ್ಲಿರುವ ಜನರಿಗೆಲ್ಲಾ ಶುದ್ಧವಾದ ಕುಡಿಯುವ ನೀರನ್ನು ಒದ ಗಿಸಬೇಕಾದರೆ ಸುಮಾರು ಇಪ್ಪತ್ತು ವರ್ಷ, ವರ್ಷಕ್ಕೆ ೨೦ ಕೋಟಿ ರೂಪಾಯಿಗಳಂತೆ ಖರ್ಚು ಮಾಡಬೇಕಾಗಬಹುದೆಂದು

ಪ್ರವೀಣರು ಅಂದಾಜು ಹಾಕಿದ್ದಾರೆ.

ಈ ಸದ್ಯದಲ್ಲಿ ಇಂಡಿಯಾ ದೇಶದ ಸರ್ಕಾರದವರು ಈ ಕೆಳ ಕಂಡ ಕೆಲ ನಿಯಮಗಳನ್ನು ಅನುಸರಿಸುತ್ತಲಿದ್ದಾರೆ; ಅವು ಯಾವುವೆಂದರೆ :—

(೧) ೫೦,೦೦೦ ಜನರಿಗಿಂತ ಹೆಚ್ಚು ಜನರಿರುವ ಊರುಗಳಲ್ಲಿ ನೀರು ಸರಬರಾಜು ವ್ಯವಸ್ಥೆಯ ಅಭಿವೃದ್ಧಿಯನ್ನು ತೆಗೆದು ಕೊಂಡಿದ್ದಾರೆ.

(೨) ತೀರ್ಥಕ್ಷೇತ್ರ, ದೇವಸ್ಥಾನ, ಜಾತ್ರೆಗಳು ಮೊದಲಾದವು ಗಳಿಗೆ ೧೦,೦೦೦ ಜನಕ್ಕಿಂತ ಹೆಚ್ಚು ಜನ ಸೇರುವ ಪುಣ್ಯಕ್ಷೇತ್ರ ಗಳಲ್ಲೆಲ್ಲಾ ಶುದ್ಧವಾದ ನಲ್ಲಿ ನೀರು ದೊರಕುವಂತೆ ಯೋಜನೆ ಯನ್ನು ತೆಗೆದುಕೊಂಡಿದ್ದಾರೆ. ಏಕೆಂದರೆ ಸಾಂಕ್ರಾಮಿಕ ರೋಗ ಗಳು ಆಗಾಗ ತಲೆದೋರುವುದು ಬಹುಶಃ ಜಾತ್ರೆ ಜಂಗುಳಿಗಳಲ್ಲಿ ಯೇ ಹೆಚ್ಚು. ಅಂತಹ ಸೌಕರ್ಯಗಳಿಲ್ಲದ ಕಡೆ ಸರ್ಕಾರದವರು ಲಾರಿಗಳಲ್ಲಿ ಸಣ್ಣ ಸಣ್ಣ ನೀರು ಶೋಧಿಸುವ ಯಂತ್ರಗಳನ್ನು ಇಟ್ಟುಕೊಂಡು ಶುದ್ಧವಾದ ಕುಡಿಯುವ ನೀರನ್ನು ಒದಗಿಸಬೇಕು. ಈಗ ಕೆಲವು ಪ್ರಾಂತ್ಯಗಳಲ್ಲಿ ಆ ರೀತಿಯ ವ್ಯವಸ್ಥೆ ಇದೆ.

(೩) ಎಲ್ಲೆಲ್ಲಿ ಕಾಲರಾ ಮೊದಲಾದ ಸಾಂಕ್ರಾಮಿಕ ರೋಗಗಳು ಆಗಿಂದಾಗ್ಗೆ ತಲೆದೋರುತ್ತಾ ಇರುವುದೋ ಅಲ್ಲೆಲ್ಲಾ ಶುದ್ಧ ವಾದ ನೀರು ಸರಬರಾಜು ವ್ಯವಸ್ಥೆಯನ್ನು ಮಾಡಲು ಕೇಂದ್ರ ಸರ್ಕಾರದವರು ಯೋಜನೆಯನ್ನು ತಯಾರಿಸಿದ್ದಾರೆ.

ನೀರು ಸರಬರಾಜು ವ್ಯವಸ್ಥೆಯ ನಿರ್ಮಾಣ ಯೋಜನೆಯನ್ನು ಅದಕ್ಕಾಗಿ ತರಪೇತಾಗಿ ಜನಾರೋಗ್ಯದ ವಿಷಯದಲ್ಲಿ ತಮ್ಮ ಜವಾಬ್ದಾರಿಯನ್ನು ತಿಳಿದಿರುವ ಜನಾರೋಗ್ಯ ಇಂಜನಿಯರ್

ಅಥವಾ ಶಿಲ್ಪಿಗೆ ವಹಿಸಬೇಕು. ಈ ಕೆಲಸವನ್ನು ಆರೋಗ
ಶಾಖೆಯ ವೈದ್ಯರಾಗಲೀ ಅಥವಾ ಮರಾಮತ್ತು ಶಾಖೆಯ
ಸಾಧಾರಣ ಇಂಜನಿಯರ್ ಆಗಲೀ ಸಮರ್ಪಕವಾಗಿ ಮಾಡಲ
ಸಾಧ್ಯವಿಲ್ಲ.

ಈಗ ನಾವು ತಯಾರಿಸಬೇಕಾದ ಸಾರ್ವಜನಿಕ ನೀರು ಸರಬ
ರಾಜು ವ್ಯವಸ್ಥೆಯ ಯೋಜನೆ ಏನೆಂಬುದನ್ನು ನಾವು ಸ್ವಲ್
ಗಮನಿಸೋಣ. ಸರಬರಾಜಾಗುವ ನೀರಿನ ಗುಣಗಳು ಒಂದೊಂದ
ದೇಶದಲ್ಲಿ ಒಂದೊಂದು ರೀತಿಯಲ್ಲಿವೆ. ನಮ್ಮ ದೇಶದಲ್ಲಿಯೇ ವಿವಿ
ಪ್ರದೇಶಗಳ ಸರ್ಕಾರಗಳು ನೀರಿನ ಗುಣಗಳ ಮಟ್ಟವನ್ನು ವಿವಿ
ರೀತಿಯಾಗಿ ಅಂಗೀಕರಿಸಿದ್ದಾರೆ. ಅಮೆರಿಕಾ, ಬ್ರಿಟನ್ ಮೊ
ಲ್ಲಾದ ದೇಶಗಳಲ್ಲಿ ಇರುವಂತೆ ನೀರಿನ ಪರಿಶುದ್ಧತೆಯನ್ನು ನಮ
ದೇಶದಲ್ಲಿ ಹೊಂದಲು ಸದ್ಯದಲ್ಲಿ ಸಾಧ್ಯವಿಲ್ಲ. ಆದಗೂ ಈ ಕೆ
ಕಂಡ ಕೆಲವು ನಿಯಮಗಳಿಗನುಸಾರ ಯೋಜನೆಯನ್ನು ತಯ
ರಿಸಿ, ಕುಡಿಯುವ ನೀರಿನ ಲಕ್ಷಣಗಳು ಮೊದಲಾದುವುಗಳಲ್ಲಿ ಅ
ಸರಿಸಬೇಕೆಂದು ಮಿತವರಿತ ನಮ್ಮ ದೇಶದ ಪ್ರವೀಣರ ಬಯಕ

ಸಾರ್ವಜನಿಕರಿಗೆ ಸರಬರಾಜು ಆಗುವ ನೀರು ಈ ಕೆಳಕಂ
ಯೋಜನೆ ಮತ್ತು ಲಕ್ಷಣಗಳನ್ನು ಒಳಗೊಂಡಿರಬೇಕು:—

(೧) ನೀರು ನೋಡುವುದಕ್ಕೆ ಶುದ್ಧವಾಗಿದ್ದು, ಸಾಂಕ್ರಾವಿ
ರೋಗಗಳನ್ನು ಹರಡುವ ಯಾವ ಕ್ರಿಮಿಯೂ ಇರದೆ, ಅ
ಮತ್ತು ಬಟ್ಟೆ ಒಗೆಯುವುದಕ್ಕೆ ಅನುಕೂಲವಾಗಿರಬೇಕು.

(೨) ನೀರು ಸರಬರಾಜು ವ್ಯವಸ್ಥೆಯು, ಆ ಪಟ್ಟಣದಲ್ಲಿ ವಾ
ಸುವ ಜನರಿಗೆ ಮತ್ತು ಅಲ್ಲಿ ನೆಲೆಸಿರುವ ಮತ್ತು ನೆಲೆಸುವ ಎಲ
ಕೈಗಾರಿಕೆಗಳಿಗೂ ಧಾರಾಳವಾಗಿ ಸುಮಾರು ೩೦ ವರ್ಷಗಳ

ತಡೆಯಿಲ್ಲದೆ ಸರಬರಾಜು ವ್ಯವಸ್ಥೆಯು ಪ್ರಾರಂಭವಾದನಂತರ ನೀರನ್ನು ಒದಗಿಸುವಂತೆ ಯೋಜನೆಯನ್ನು ತಯಾರಿಸಬೇಕು.

(೩) ಜನರು ತಮಗೆ ಬೇಕಾದ ನೀರು ತಾವು ಪಡೆದುಕೊಳ್ಳಲು ಆದಷ್ಟು ಮಟ್ಟಿಗೆ ಕಡಿಮೆ ಕಷ್ಟಕಾರ್ಪಣ್ಯಗಳು ಮತ್ತು ಅಡ್ಡಿ ಆತಂಕಗಳು ಇರಬೇಕು. ನೀರು ಹೊತ್ತು ತರುವ ದೂರವು ಕಡಿಮೆ ಇರಬೇಕು.

(೪) ದಿನದ ೨೪ ಘಂಟೆಗಳೂ ಸಾಧ್ಯವಾದರೆ ನೀರು ಸರಬರಾಜು ಒದಗಿಸಬೇಕು. ಇದರಿಂದ ಮನೆಗಳಲ್ಲಿ ಆಗುವ ನೀರಿನ ಪೋಲು ತಪ್ಪುತ್ತದೆ.

(೫) ನೋಡುವುದಕ್ಕೆ ಅಷ್ಟು ಚೆನ್ನಾಗಿಲ್ಲದೆ, ಉಪ್ಪಾಗಿದ್ದು ಬಟ್ಟೆ ಒಗೆಯುವುದಕ್ಕೆ ಬಹಳ ಅನುಕೂಲವಿಲ್ಲದೆ, ರಾಸಾಯನಿಕ ವಾಗಿ ಶುದ್ಧತೆ ಇಲ್ಲದಿದ್ದರೂ, ಜನರ ದೇಹಕ್ಕೆ ಅದನ್ನು ಕುಡಿ ಯುವುದರಿಂದ ಯಾವ ಅಪಾಯ ಉಂಟಾಗದೆ ಸಾಂಕ್ರಾಮಿಕ ರೋಗಗಳನ್ನು ಹರಡದಂಥ ನೀರನ್ನು ಸರಬರಾಜಿಗೆ ಉಪಯೋಗಿಸ ಬಹುದು.

(೬) ಎಲ್ಲೆಲ್ಲಿ ೧೦೦೦, ಜನಕ್ಕಿಂತ ಹೆಚ್ಚಿಗೆ ಜನರು ವಾಸಿಸು ವರೋ ಅಲ್ಲೆಲ್ಲಾ ಶುದ್ಧವಾದ ಪೈಪಿನ ನೀರನ್ನು ಒದಗಿಸಬೇಕು. ಆದರೆ ಸದ್ಯದಲ್ಲಿ ೧೦,೦೦೦ಕ್ಕೆ ಮೇಲಿರುವ ಊರುಗಳಿಗೆಲ್ಲಾ ಪೈಪಿನ ನೀರನ್ನು ಒದಗಿಸಿದರೆ ಸಾಕಾಗಿದೆ. ಅದಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಊರುಗಳಿಗೆ ಮತ್ತು ಹಳ್ಳಿಗಳಿಗೆ ಸರಿಯಾಗಿ ರಕ್ಷಿತವಾದ ಬಾವಿ ಅಥವಾ ನಳಿಗೆ ಬಾವಿಗಳಿಂದ (ಬೋರ್ ವೆಲ್ಸ್) ನೀರನ್ನು ಒದಗಿಸಿದರೆ ಸಾಕು.

ಈಗ ಪೈಪಿನ ನೀರಿನಿಂದ ಆಗಬಹುದಾದ ಕೆಲವು ಉಪಯೋಗ

ಗಳನ್ನು ತಿಳಿಯೋಣ.

(೧) ವಾಸಿಸುವ ಮನೆಗಳಿಗೆ ಕುಡಿಯುವುದಕ್ಕೆ, ಅಡಿಗೆ ಮಾಡು ವುದಕ್ಕೆ, ಸ್ನಾನಕ್ಕೆ, ಬಟ್ಟೆ ಒಗೆಯುವುದಕ್ಕೆ, ಮತ್ತು ಕಕ್ಕಸು ಗಳನ್ನು ಶುದ್ಧ ಪಡಿಸುವುದಕ್ಕೆ ನೀರು ಒದಗಿಸಬೇಕು.

(೨) ಸಾರ್ವತ್ರಿಕವಾಗಿ ರಸ್ತೆಗಳನ್ನು ಶುದ್ಧಪಡಿಸುವುದಕ್ಕೆ ಒಳಚರಂಡಿಗಳನ್ನು ಶುದ್ಧಪಡಿಸುವುದಕ್ಕೆ, ರಸ್ತೆಗಳ ಮೇಲೆ ನೀರು ಚಿಮುಕಿಸುವುದಕ್ಕೆ, ಪಟ್ಟಣದ ತೋಟ ಅಥವಾ ಉದ್ಯಾನವನ ಗಳನ್ನು ಬೆಳೆಸುವುದಕ್ಕೆ, ಸರ್ಕಾರಿ ಮತ್ತು ಖಾಸಗೀ ಕಛೇರಿ ಗಳಿಗೆ ನೀರನ್ನು ಸರಬರಾಯಿ ಮಾಡಬೇಕು.

(೩) ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆಗಳಿಗೆ, ಏರ್ ಕಂಡಿಷನ್‌ಗೆ, ಮಂಜುಗೆಡ್ಡೆ ಮಾಡುವುದಕ್ಕೆ, ಮೊದಲಾದ ಕಾರ್ಯ ಗಳಿಗೆ ನೀರನ್ನು ಒದಗಿಸಬೇಕು.

(೪) ಹಸು, ಎಮ್ಮೆ, ಎತ್ತು, ಕುದುರೆ ಮೊದಲಾದ ನಮ ನಿತ್ಯೋಪಯೋಗಿ ಪ್ರಾಣಿಗಳಿಗೆ ಕುಡಿಯಲು ಮತ್ತು ತೊಳೆಯಲ ನೀರನ್ನು ಒದಗಿಸಬೇಕು.

(೫) ಸಮಯ ಬಂದಾಗ ಬೆಂಕಿ ಆರಿಸುವುದಕ್ಕೆ ನೀರನ್ನು ಒದಗಿಸಬೇಕು.

(೬) ಮೇಲ್ಕಂಡ ಉಪಯೋಗಗಳಲ್ಲದೆ ಪೈಪುಗಳಿಂದ ಸೋರಿ ಹೋಗಿ ವ್ಯರ್ಥವಾಗುವ ನೀರು ಸುಮಾರು ಒಟ್ಟು ಸರಬರಾಜಿನ ಶೇಕಡಾ ೧೦ರ ಮೇಲಿರುತ್ತದೆ.

ಈ ಮೇಲ್ಕಂಡ ಉಪಯೋಗಗಳಿಗೆ ದಿನಂಪ್ರತಿ ಪ್ರತಿಪ್ರಜೆಗೆ ಬೇಕಾಗುವ ನೀರು, ಆ ಊರಿನ ಜನಸಂಖ್ಯೆ ಜನಜೀವನದ ಮಟ್ಟ ಮೊದಲಾದುವುಗಳ ಮೇಲೆ ಅವಲಂಬಿಸಿರುತ್ತದೆ. ಸುಲಭವಾಗಿ

ಲೆಕ್ಕಮಾಡಲು ಉಪಯೋಗವಾಗುವಂತೆ ಪ್ರವೀಣರು ಈ ಕೆಳಕಂಡ ಸೂತ್ರಗಳನ್ನು ಅನುಸರಿಸಬೇಕೆಂದು ನಿರ್ಧರಿಸಿದ್ದಾರೆ.

(a) ೧,೦೦೦ ದಿಂದ ೫,೦೦೦ ಜನಗಳವರೆಗೆ ಜನಸಂಖ್ಯೆ ಇದ್ದು ಒಳಚರಂಡಿ ವ್ಯವಸ್ಥೆ ಇಲ್ಲದ ಊರುಗಳಲ್ಲಿ—ದಿನಂಪ್ರತಿ ಪ್ರತಿ ಪ್ರಜೆಗೆ ೧೫ ಗ್ಯಾಲನ್ನಿನಂತೆ (೭೦ ಲೀಟರ್) ನೀರು ಸರಬರಾಜಿನ ಅಂದಾಜು ತಯಾರಿಸಬೇಕು.

(b) ೫,೦೦೦ ದಿಂದ ೨೦,೦೦೦ ಜನರಿದ್ದು ಒಳಚರಂಡಿ ವ್ಯವಸ್ಥೆ ಇಲ್ಲದಿರುವ ಊರುಗಳಿಗೆ—ದಿನಂಪ್ರತಿ ಪ್ರಜೆಗಳಿಗೆ ೨೦ ಗ್ಯಾಲನ್ನಿನಂತೆ (೯೦ ಲೀಟರ್) ಅಂದಾಜು ತಯಾರಿಸಬೇಕು.

(c) ೨೦,೦೦೦ ಜನರಿಂದ ೫೦,೦೦೦ ಜನರವರೆಗೆ ಇದ್ದು ಒಳಚರಂಡಿ ವ್ಯವಸ್ಥೆ ಇಲ್ಲದಿರುವ ಊರುಗಳಿಗೆ—ದಿನಂಪ್ರತಿ, ಪ್ರತಿ ಪ್ರಜೆಗೆ ದಿನಕ್ಕೆ ೨೫ ಗ್ಯಾಲನ್ನಿನಂತೆ (೧೨೦ ಲೀಟರ್) ಅಂದಾಜು ತಯಾರಿಸಬೇಕು.

ಮೇಲಿನ ಊರುಗಳಲ್ಲಿ ಒಳಚರಂಡಿ ವ್ಯವಸ್ಥೆಯಿದ್ದರೆ ಪ್ರತಿ ಪ್ರಜೆಗೆ ೫ ಗ್ಯಾಲನ್ನು (೨೫ ಲೀಟರ್) ದಿನಂಪ್ರತಿ ಹೆಚ್ಚಾಗಿ ಒದಗಿಸಬೇಕು.

(d) ೫೦,೦೦೦ ದಿಂದ ೨,೦೦,೦೦೦ ದವರೆಗೆ ಜನಸಂಖ್ಯೆಯಿರುವ ಊರುಗಳಿಗೆ—ಒಬ್ಬರಿಗೆ ದಿನಕ್ಕೆ ೪೦ ಗ್ಯಾಲನ್ನಿನಂತೆ (೧೮೦ ಲೀಟರ್) ಅಂದಾಜು ತಯಾರಿಸಬೇಕು.

(e) ೨,೦೦,೦೦೦ ಗಳ ಮೇಲೆ ಜನರಿರುವ ಊರುಗಳಿಗೆ ಒಬ್ಬರಿಗೆ ದಿನಕ್ಕೆ ೪೫ ಗ್ಯಾಲನ್ನುಗಳಂತೆ (೨೨೫ಲೀಟರ್) ಅಂದಾಜನ್ನು ತಯಾರಿಸಬೇಕು.

(f) ಹಳ್ಳಿಗಳ ನೀರು ಸರಬರಾಜು ಯೋಜನೆಯನ್ನು ತಯಾ

ರಿಸುವಾಗ-ದಿನಕ್ಕೆ ಒಬ್ಬರಿಗೆ ೫ ಗ್ಯಾಲನ್ನುಗಳಂತೆ (೨೫ಲೀಟರ್)
ಅಂದಾಜನ್ನು ತಯಾರಿಸಿದರೆ ಸಾಕು, ಅಥವಾ ೫೦ ಜನರಿಗೊಂದ
ರಂತೆ ಮನೆಗಳಿಂದ ೨ ಫರ್ಲಾಂಗ್(೦.೪ ಕಿ ಮೀ) ದೂರದೊಳಗಾಗಿ
ಒಂದೊಂದು ಬಾವಿಯಿದ್ದರೂ ಸಾಕು. ಇಲ್ಲವಾದಲ್ಲಿ ಕೊನೆಯ
ಪಕ್ಷ ೫೦೦ ಜನರಿಗಾದರೂ ಮನೆಯಿಂದ ೬ ಫರ್ಲಾಂಗ್
(೧.೨. ಕಿ.ಮೀ) ದೂರದೊಳಗಾಗಿ ಒಂದು ಬಾವಿಯನ್ನಾದರೂ
ತೋಡಿಸಲೇಬೇಕು.

ಯಾವುದಾದರೂ ನೀರು ಸರಬರಾಜು ಯೋಜನೆಯನ್ನು
ತೆಗೆದುಕೊಂಡಾಗ, ಯೋಜನೆಯನ್ನು ತಯಾರಿಸುವ ಕಾಲಕ್ಕೂ
ಮತ್ತು ಅಂಥ ಯೋಜನೆಯನ್ನು ಕಾರ್ಯಗತ ಮಾಡಿ ನಿರ್ಮಿಸಿ
ಮುಗಿಸುವ ಕಾಲವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಈ
ಕಾಲವು ೫ ವರ್ಷಗಳಿಗಿಂತ ಹೆಚ್ಚಿರಬಾರದು. ಇಲ್ಲವಾದಲ್ಲಿ ಕಟ್ಟಿ
ಮುಗಿಸುವುದರೊಳಗಾಗಿ ಆಗುವ ಕಾಲದಲ್ಲಿ ಉಂಟಾಗುವ ಹೆಚ್ಚಿನ
ಜನಸಂಖ್ಯೆಯನ್ನು ನಾವು ಗಣನೆಗೆ ತೆಗೆದುಕೊಂಡಂತಾಗುವುದಿಲ್ಲ.

ಬೆಂಕಿ ಆರಿಸುವುದಕ್ಕೂ ಮತ್ತು ಮನೆಗಳಿಗೆ ನೀರು ಸರಬ
ರಾಜು ಮಾಡುವುದಕ್ಕೂ ಪೈಪಿನಲ್ಲಿ ನೀರಿನ ಒತ್ತಡವು ಸಾಕಷ್ಟು
ಇರಬೇಕು. ೨ ಲಕ್ಷಕ್ಕಿಂತ ಹೆಚ್ಚು ಜನರಿರುವ ಪಟ್ಟಣಗಳಲ್ಲಿ
೩-೪ ಅಂತಸ್ತುಗಳಿರುವ ಕಟ್ಟಡಗಳು ಸರ್ವಸಾಮಾನ್ಯವಾಗಿ ಇರು
ವುದರಿಂದ ಅಂತಹ ಊರುಗಳಲ್ಲಿ ನೀರಿನ ಒತ್ತಡವು ಸುಮಾರು
೫೦ ಅಡಿಗಳಷ್ಟು (೧೫ ಮೀ) ಎತ್ತರವಾದರೂ ಹತ್ತುವಂತಿರ
ಬೇಕು. ೨ ಲಕ್ಷಕ್ಕಿಂತ ಕಡಿಮೆ ಇರುವ ಪಟ್ಟಣಗಳಲ್ಲಿ ಎರಡು
ಅಂತಸ್ತುಗಳಿರುವ ಮನೆಗಳು ಸಾಮಾನ್ಯವಾಗಿ ಇರುವುದರಿಂದ
ನಲ್ಲಿ ನೀರಿನ ಒತ್ತಡವು ಸುಮಾರು ೩೫ ಅಡಿಗಳ (೧೦ ಮೀ

ಎತ್ತರವಾದರೂ ಹತ್ತುವಂತಿರಬೇಕು.

ಶುದ್ಧಪಡಿಸಿದ ಮತ್ತು ಶುದ್ಧಪಡಿಸದ ಎರಡು ರೀತಿಯ ನೀರನ್ನು ಜನರಿಗೆ ಸರಬರಾಜು ಮಾಡುವುದರಿಂದ ಕೆಲವು ಸಮಯಗಳಲ್ಲಿ ಅಪಾಯಗಳಿಗೆ ಅಂದರೆ ಸಾಂಕ್ರಾಮಿಕ ರೋಗಗಳಿಗೆ ಗುರಿಯಾಗಬಹುದು. ಆದುದರಿಂದ ಅಂತಹ ಸರಬರಾಜಿಗೆ ಪ್ರೋತ್ಸಾಹ ಕೊಡಕೂಡದು.

ನೀರನ್ನು ಕೆಲವೇ ಘಂಟೆಗಳ ಕಾಲ ಪಟ್ಟಣಗಳಲ್ಲಿ ಸರಬರಾಜು ಮಾಡುವುದರಿಂದ ಜನರಲ್ಲಿ ಅಸಂತೋಷವೂ, ನೀರು ಬಿಟ್ಟಾಗ ಹಳೆಯ ನೀರನ್ನು ಚೆಲ್ಲಿ ಹೊಸ ನೀರನ್ನು ಹಿಡಿದು ಇಡುವುದರಿಂದ ಅನಾವಶ್ಯಕವಾದ ನೀರಿನ ಪೋಲೂ, ಒಂದೇ ಸಮನಾಗಿ ಸರಬರಾಜು ಆಗಲಿಕ್ಕೆ ಅವಕಾಶವಿಲ್ಲದಿರುವಿಕೆಯೂ, ಪೈಪಿನ ಜಾಯಿಂಟ್‌ನಲ್ಲಿ ಇರಬಹುದಾದ, ಸಾಂಕ್ರಾಮಿಕ ರೋಗ ಹರಡುವ ಕ್ರಿಮಿಗಳನ್ನು ಪೈಪಿನಲ್ಲಿ ನೀರಿನ ಒತ್ತಡವು ಕಡಿಮೆ ಇರುವಾಗ ಒಳಗೆ ಹೀರಿಕೊಳ್ಳುವುದರಿಂದ ಆಗುವ ಅಪಾಯಗಳೂ, ಈ ರೀತಿಯ ಸರಬರಾಜಿನಿಂದ ಆಗುತ್ತವೆ. ಅಲ್ಲದೆ ಈ ರೀತಿಯ ಸರಬರಾಜಿನಿಂದ ಬೆಂಕಿ ಆರಿಸಬೇಕಾದಾಗ ಪೈಪಿನಲ್ಲಿ ನೀರೇ ಇರುವುದಿಲ್ಲ.

ನೀರಿನ ಮುಖ್ಯ ಪೈಪುಗಳ ಅಳತೆಯು, ಅವುಗಳು ಕೊನೆಯ ಪಕ್ಷ ೨೦ ವರ್ಷಗಳನಂತರ ಬೇಕಾಗುವ ನೀರನ್ನು ಸರಬರಾಜು ಮಾಡುವಂತಿರಬೇಕು. ನಗರದ ಮುಖ್ಯ ಬೀದಿಗಳಲ್ಲಿರುವ ಪೈಪುಗಳ ಅಳತೆ ಅವುಗಳಿಂದ ಪ್ರತಿದಿನ ಸರಬರಾಜು ಆಗಬೇಕಾಗಿರುವ ನೀರಿಗಿಂತ ಶೇಕಡಾ ೧೫೦ ರಷ್ಟಾದರೂ ಸರಬರಾಜು ಮಾಡುವಂತಿರಬೇಕು. ಮನೆಗಳಿಗೆ ನೀರು ಸರಬರಾಜು ಮಾಡುವ ಪೈಪು

ಗಳ ಅಳತೆಯು ಅವು ಪ್ರತಿದಿನ ಮಾಡಬೇಕಾದ ಸರಬರಾಜಿಗಿಂತ ಶೇಕಡಾ ೨೫ ರಷ್ಟಾದರೂ ಮಾಡುವಂತಿರಬೇಕು. ನೀರನ್ನು ಒಯ್ಯುವ ಯಾವ ಪೈಪೂ ನಿಮಿಷಕ್ಕೆ ೪೦೦ ಗ್ಯಾಲನ್ನುಗಳನ್ನಾದರೂ (೧೮೦೦ ಲೀಟರ್) ಒದಗಿಸುವಂತಿರಬೇಕು, ಮತ್ತು ಅದರ ಅಡ್ಡಳತೆಯು ೪ ಅಂಗುಲಕ್ಕಿಂತ ಕಡಿಮೆ ಇರಬಾರದು. ಇಲ್ಲವಾದಲ್ಲಿ ಬೇಕಾದಾಗ ಬೆಂಕಿ ಆರಿಸುವ ಕೆಲಸವು ಸಮರ್ಪಕವಾಗಿ ನಡೆಯದು. ನಗರದ ವಿವಿಧ ಪೈಪುಗಳ ಅಳತೆಗಳು ಅವು ವಿವಿಧ ಭಾಗಗಳಿಗೆ ಒಯ್ಯಬೇಕಾಗಿರುವ ನೀರಿನ ಮೊತ್ತಕ್ಕೆ ಸರಿಹೋಗುವುದೇ ಎಂಬುದನ್ನು ಆಧುನಿಕ ರೀತಿಯಾದ 'ಹಾರ್ಡಿಕ್ರಾಸ್‌ನ ಸೂತ್ರ' 'ಮೆಥೆಡ್ ಆಫ್ ಸೆಕ್ಸನ್ಸ್' ಮೊದಲಾದುವುಗಳಿಂದ ಪರೀಕ್ಷಿಸಬೇಕು.

ಪೈಪುಗಳಿಗೆ ಜೋಡಿಸಲು ಬೇಕಾಗುವ 'ಸ್ಪೆಷಲ್ಸ್' ಗಳ ಯೋಜನೆಯನ್ನು ತಯಾರಿಸುವಾಗ ಆದಷ್ಟು ಮಟ್ಟಿಗೆ ಕಡಿಮೆ ಮಾಡಬೇಕು. ಇಲ್ಲವಾದಲ್ಲಿ ಅನಾವಶ್ಯಕವಾದ ಖರ್ಚು ಮತ್ತು ತಡವಾಗುವುದಕ್ಕೆ ಕಾರಣವಾಗುತ್ತದೆ.

ಸರಬರಾಜು ಪೈಪುಗಳ ಸಮರ್ಪಕತೆಯನ್ನು ಪರೀಕ್ಷಿಸಲು ಅಲ್ಲಲ್ಲಿ ಪ್ರವಾಹ ಮತ್ತು ಒತ್ತಡಗಳನ್ನು ಅಳೆಯುವ ಯಂತ್ರಗಳನ್ನು ಹಾಕಬೇಕು. ಇದರಿಂದ ನೀರು ಪೋಲಾಗುವ ಸ್ಥಳಗಳನ್ನೂ ಕಂಡುಹಿಡಿಯಬಹುದು.

ಅಳವಾದ ನಳಿಗೆ ಬಾವಿಗಳಿಂದ (ಬೋರ್ ವೆಲ್) ಬಂದ ನೀರಿನ ಹೊರತಾಗಿ ಮಿಕ್ಕೆಲ್ಲ ರೀತಿಯ ನೀರನ್ನು ಶೋಧಿಸಿದ ಮೇಲೆ ಕ್ಲೋರೀನ್ ಮೊದಲಾದ ದ್ರಾವಣಗಳ ಜೊತೆ ಬೆರಿಸಿ ಕುಡಿಯುವ ನೀರಿನಲ್ಲಿ, ಯಾವ ಸಾಂಕ್ರಾಮಿಕ ಕ್ರಿಮಿಗಳೂ ಇರ

ದಂತೆ ಶುದ್ಧಪಡಿಸಬೇಕು.

ಕುಡಿಯುವ ನೀರನ್ನು ಶುದ್ಧಗೊಳಿಸುವ ಯಂತ್ರಗಳಾದ 'ಸೆಟ್ಲಿಂಗ್ ಟ್ಯಾಂಕ್' 'ಫಿಲ್ಟರ್ಸ್' ಮೊದಲಾದ ಯಂತ್ರಗಳ ಶಕ್ತಿ ಮತ್ತು ಪ್ರಮಾಣವನ್ನು ನಿರ್ಧರಿಸಬೇಕಾದರೆ, ಅಲ್ಲಿ ಸಿಕ್ಕುವ ನೀರಿನ ಸೌಕರ್ಯ, ಪ್ರಮಾಣ, ಗುಣ, ಲಕ್ಷಣ ಮೊದಲಾದುವು ಗಳನ್ನು ಪರೀಕ್ಷಿಸಿ ನಿರ್ಧರಿಸಬೇಕು. ಕೆಲವೇ ಘಂಟೆಗಳು ನೀರು ಸರಬರಾಜು ಮಾಡುವುದರಿಂದ ದೊಡ್ಡ ಫಿಲ್ಟರ್‌ಗಳನ್ನು ಕಟ್ಟ ಬೇಕಾಗುತ್ತದೆ. ಅಲ್ಲದೆ ಮಿಕ್ಕ ಯಂತ್ರಗಳೂ ಹೆಚ್ಚಿನ ಪ್ರಮಾಣ ದಲ್ಲಿ ಇರಬೇಕಾಗುವುದರಿಂದ ಅನಾವಶ್ಯಕವಾದ ನೀರು ಸರಬ ರಾಯಿ ವ್ಯವಸ್ಥೆಯ ವೆಚ್ಚವು ಬಹಳ ಹೆಚ್ಚಾಗುತ್ತದೆ.

೨ ದಶಲಕ್ಷ ಗ್ಯಾಲನ್ನುಗಳಿಗಿಂತ (೯ ದಶಲಕ್ಷ ಲೀಟರ್) ಹೆಚ್ಚಿಗೆ ನೀರು ಸರಬರಾಜು ಮಾಡಬೇಕಾದ ಕಡೆಗಳಲ್ಲೆಲ್ಲಾ ನೀರಿನಲ್ಲಿ ಕ್ರಿಮಿ ಶೋಧನೆ ಮಾಡುವ ಸಿಬ್ಬಂದಿ ಮತ್ತು ಲ್ಯಾಬೋ ರೇಟರಿಗಳನ್ನು ಸ್ಥಾಪಿಸಬೇಕು. ಈ ಶೋಧನೆಯನ್ನು ಬ್ರಿಟನ್ ಮತ್ತು ಅಮೆರಿಕನ್ ಆರೋಗ್ಯ ಸಂಸ್ಥೆಗಳು ನಿರ್ದೇಶಿಸಿರುವಂತೆ ಮಾಡುವುದು ಸಮರ್ಪಕ ರೀತಿ. ಅಂಥ ಲ್ಯಾಬೋರೇಟರಿ ಗಳಲ್ಲಿ ಟರ್ಬಿಡಿಟಿ, ಬಣ್ಣ ಪಿ. ಎಚ್. ಬೆಲೆ, ಕ್ಷಾರತೆ, ದ್ರಾವಕತೆ ನೀರನ್ನು ಶೋಧಿಸಲು ಬೇಕಾಗುವ ರಸಾಯನಗಳು ನೀರಿನಲ್ಲಿರುವ ಉಪ್ಪುಗಳು ನೀರಿನಲ್ಲಿರುವ ಕ್ಲೋರೀನ್ ದ್ರಾವಣ ಮೊದಲಾದು ವುಗಳನ್ನು ಕಂಡುಹಿಡಿಯಲು ಬೇಕಾಗುವ ವ್ಯವಸ್ಥೆಗಳೂ ಇರ ಬೇಕು.

ಹಬ್ಬ ಹರಿದಿನಗಳಲ್ಲಿ, ಜಾತ್ರೆಜಂಗುಳಿಗಳಲ್ಲಿ, ಮತ್ತು ಇನ್ನೂ ಅನೇಕ ಹೆಚ್ಚು ಜನ ಸೇರುವ ಸಮಯಗಳಲ್ಲಿ ಸರಬರಾಜು ಆಗುವ

ನೀರಿನ ಪ್ರಮಾಣದ ಕೊನೆಯಪಕ್ಷ ೦.೩ ಭಾಗ ಕ್ಲೋರಿನ್ ಆದರೂ ದಶಲಕ್ಷ ಭಾಗದ ನೀರಿನಲ್ಲಿ ಇರಬೇಕು. ಹಳ್ಳಿಗಳಿಗೆ ಸರಬರಾಜು ಮಾಡುವ ನೀರು ಸುರಕ್ಷಿತವಾದ ಬಾವಿಯ ನೀರು ಅಥವಾ ನಳಿಗೆ ಬಾವಿಯ (ಬೋರ್‌ವೆಲ್) ನೀರಾಗಿರಬೇಕು. ಏಕೆಂದರೆ ಇಂಥ ನೀರಿನಲ್ಲಿ ಸಾಂಕ್ರಾಮಿಕ ರೋಗಗಳನ್ನು ಹರಡುವ ಕ್ರಿಮಿಗಳಿರುವುದು ಬಹಳ ಅಪರೂಪ. ಬಾವಿಯ ನೀರಿಗೆ ಬಾವಿಯ ಶುಚಿತ್ವ, ಅವುಗಳ ಬಾಯಿ ಮುಚ್ಚಿರುವುದು, ಜನರು ಅಶುಚಿಯಾದ ಪಾತ್ರೆ ಹಗ್ಗಗಳನ್ನು ಬಿಡದಂತೆ ಪಂಪುಗಳಿಂದ ನೀರನ್ನು ಸಂಗ್ರಹಿಸುವುದು ಮೊದಲಾದ ಕ್ರಮಗಳನ್ನು ಅನುಸರಿಸುವುದರಿಂದ ಶುದ್ಧವಾದ ನೀರನ್ನು ಪಡೆಯಲು ಸಾಧ್ಯವಾಗುತ್ತದೆ.

ನೀರು ಸರಬರಾಜು ಆಗುವ ಟ್ಯಾಂಕುಗಳನ್ನು ಮತ್ತು ಶೋಧನಾಲಯದಲ್ಲಿರುವ ಶುದ್ಧ ನೀರಿನ ಟ್ಯಾಂಕ್‌ಗಳನ್ನು ಗಲೀಜು ಸೇರಲು ಅವಕಾಶವಿರದಂತೆ ಕಾಪಾಡಬೇಕು. ನೀರು ಸರಬರಾಜು ಟ್ಯಾಂಕ್‌ಗಳ ಅಳತೆ ಅವು ಸರಬರಾಜು ಮಾಡಬೇಕಾಗಿರುವ ವಿಸ್ತೀರ್ಣ, ಜನಸಂಖ್ಯೆ, ಆಕಸ್ಮಾತ್ ಆಗುವ ಬೆಂಕಿ ಆರಿಸಲು ಬೇಕಾಗುವ ನೀರು ಮೊದಲಾದುವುಗಳನ್ನು ಅನುಸರಿಸಬೇಕು.

ಸಾರ್ವಜನಿಕ ನಲ್ಲಿಗಳನ್ನು ೮೦ ರಿಂದ ೧೫೦ ಜನರಿಗೊಂದರಂತೆ ರಸ್ತೆಗಳಲ್ಲಿ ಏರ್ಪಡಿಸಬೇಕು.

ನೀರಿನ ಉಪಯೋಗವು ಜನರಿಂದ ಸರಿಯಾದ ರೀತಿಯು ಆಗಬೇಕಾದರೆ, ಕೊಳಾಯಿ ಮೀಟರುಗಳನ್ನು ಪ್ರತಿಯೊಂದು ಮನೆಯಲ್ಲೂ ಹಾಕಬೇಕು ಮತ್ತು ನೀರಿನ ಚಾರ್ಜನ್ನು ಸರಿಯಾದ ರೀತಿಯಲ್ಲಿ ವಸೂಲಿ ಮಾಡಬೇಕು.

ಪ್ರತಿ ನಗರಕ್ಕೂ ಸರಬರಾಜು ಆಗುವ ನೀರಿನ ಸರಬರಾ

ವ್ಯವಸ್ಥೆಯಲ್ಲಿ, ಅಲ್ಲಲ್ಲಿ ನೀರನ್ನು ಒಂದು ಕ್ರಮವಾಗಿ ಪರೀಕ್ಷಿಸುವ ವಿಧಾನವನ್ನು ಸಿದ್ಧಗೊಳಿಸಿ ಅದರಂತೆ ತಪ್ಪದೆ ನಡೆಸಬೇಕು. ಅದರಿಂದ ಶುದ್ಧವಾದ, ಅಪಾಯರಹಿತವಾದ ನೀರಿನ್ನು ಜನರಿಗೆ ಒದಗಿಸಲು ಸಾಧ್ಯವಾಗುತ್ತದೆ.

ಈಗ ಪ್ರತಿಯೊಂದು ನಗರದಲ್ಲಿಯೂ ಮತ್ತು ಹಳ್ಳಿಗಳಲ್ಲಿಯೂ, ಸರಿಯಾದ ನೀರಿನ ಹಂಚಿಕೆ ನಡೆಸಲು ಅಡ್ಡವಾಗಿರುವ ದೊಡ್ಡ ಸಮಸ್ಯೆಯೆಂದರೆ, ಅಂತಹ ವ್ಯವಸ್ಥೆಗಳನ್ನು ಕಟ್ಟಲು ಬೇಕಾಗುವ ಪದಾರ್ಥಗಳ ಅಭಾವ. ಅವುಯಾವುವೆಂದರೆ:—

(a) ಕಬ್ಬಿಣದ ಪೈಪುಗಳು ಮತ್ತು ಅವುಗಳನ್ನು ಜೋಡಿಸಲು ಬೇಕಾಗುವ 'ಸ್ಪೆಷಲ್‌ಗಳು'.

(b) ಪಂಪುಮಾಡಲು ಬೇಕಾಗುವ ಯಂತ್ರಗಳು.

(c) ಸಿಮೆಂಟು.

(d) ಇಟ್ಟಿಗೆ.

(e) ಉಕ್ಕು ಮತ್ತು ರಾಸಾಯನಿಕ ದ್ರವ್ಯಗಳು.

ನೀರು ಸರಬರಾಜು ವ್ಯವಸ್ಥೆಯ ಮೊತ್ತ ಹಣದ ವೆಚ್ಚದ ಶೇಕಡಾ ೭೦-೮೦ ಭಾಗವು ಪೈಪುಗಳಿಗೆ ಆಗುತ್ತದೆ. ನಮ್ಮ ಇಂಡಿಯಾ ದೇಶಕ್ಕೆ ೧೫೦,೦೦೦ ಟನ್ನುಗಳಷ್ಟು ಎರಕ ಕಬ್ಬಿಣದ ಪೈಪುಗಳು ಪ್ರತಿ ವರ್ಷವೂ ಬೇಕು. ಆದರೆ ಸದ್ಯದಲ್ಲಿ ಇಂಡಿಯಾ ದೇಶದಲ್ಲಿ ತಯಾರಾಗುತ್ತಲಿರುವುದು ಕೇವಲ ೨೪,೦೦೦ ಟನ್ನುಗಳು ಮಾತ್ರ. ಉಕ್ಕಿನ ಪೈಪುಗಳು ನಮ್ಮ ದೇಶದ ನೀರು ಸರಬರಾಜಿಗೆ ಎಷ್ಟೋ ಕಡೆ ಬೇಕು. ಆದರೆ ಅವುಗಳನ್ನು ನಮ್ಮ ದೇಶ ತಯಾರು ಮಾಡುತ್ತಿಲ್ಲ. ಜಿ.ಐ. ಪೈಪುಗಳು ಮತ್ತು ಬೀಡು ಕಬ್ಬಿಣದ ಪೈಪುಗಳು ನಮ್ಮ ದೇಶಕ್ಕೆ ಸುಮಾರು ೧೫,೦೦೦ ದ್ದಿತ್ತದ

೨೦,೦೦೦ ಟನ್ನುಗಳಷ್ಟು, ಪ್ರತಿ ವರ್ಷವೂ ನಮ್ಮ ದೇಶದ ಹಳ್ಳಿಗಳ ಮತ್ತು ನಗರಗಳ ನೀರು ಸರಬರಾಜಿಗೆ ಬೇಕು. ಆದರೆ ನಾವು ಅವುಗಳನ್ನು ತಯಾರಿಸುತ್ತಿಲ್ಲ.

ದೊಡ್ಡ ಪಂಪುಗಳ ಆಮದು ಸಣ್ಣ ಪಂಪುಗಳ ತಯಾರಿಕೆ ತ್ವರಿತ ಗತಿಯಿಂದ ಸಾಗಬೇಕು. ನಮ್ಮ ಇಂಡಿಯಾ ದೇಶಕ್ಕೆ ನೀರು ಶುದ್ಧಿಗೊಳಿಸುವ ಕಾರ್ಯಕ್ಕೆ ಮಾತ್ರ ಸುಮಾರು ೪,೫೦೦ ಟನ್ನುಗಳಷ್ಟು 'ಕ್ಲೋರಿನ್', ೧೨,೦೦೦ ಟನ್ನುಗಳಷ್ಟು 'ಆಲಮ್' (ಪಟಿಕ) ಬೇಕಾಗುತ್ತದೆ. ಇದರಲ್ಲಿ ಬಹುಭಾಗ ನಾವು ಹೊರ ದೇಶಗಳಿಂದ ತರಿಸಿಕೊಳ್ಳಬೇಕಾಗಿದೆ. ಈ ಪರಾವಲಂಬನೆಯ ಕಾರಣದಿಂದ ನಮ್ಮ ಯೋಜನೆಗಳು ಬಹಳ ತಡವಾಗಿ ಕೈಗೂಡುತ್ತಲಿವೆ.

## ೫. ಸಮಾಜದಿಂದ ವಿಸರ್ಜಿಸಲ್ಪಟ್ಟ ಅಥವಾ ಬೇಡವಾದ ವಸ್ತುಗಳನ್ನು ಶುಚಿಯಾಗಿ ಶೇಖರಿಸಿ, ಸಾಗಿಸಿ, ವಿಸರ್ಜಿಸುವಿಕೆ

ಬರಿಯ ಶುದ್ಧವಾದ ನೀರನ್ನು ಕುಡಿಯಲಿಕ್ಕೆ ಒದಗಿಸಿದರೆ ಮಾತ್ರ, ಕರುಳು ಸಂಬಂಧವಾದ ಕಾಯಿಲೆಗಳಿಂದ ಮನುಷ್ಯ ನನ್ನು ತಪ್ಪಿಸಿದಂತೆ ಆಗುವುದಿಲ್ಲ. ಮನುಷ್ಯನ ಮಲಮೂತ್ರ ಗಳ ಮೇಲೆ ಕುಳಿತುಕೊಳ್ಳುವ ನೊಣವು, ಅದರಲ್ಲಿ ತನ್ನ ಸಂತ ತಿಯನ್ನು ಬೆಳಸುವುದಲ್ಲದೆ, ಅದರಲ್ಲಿರುವ ಸಾಂಕ್ರಾಮಿಕ ರೋಗಗಳನ್ನು ಹರಡುವ ಕ್ರಿಮಿಗಳನ್ನು ನಾವು ತಿನ್ನುವ ಆಹಾ ರಕ್ಕೋ ಅಥವಾ ಕುಡಿಯುವ ಪಾನೀಯಗಳಿಗೋ ತಂದು ಸೇರಿಸುತ್ತದೆ. ಆದುದರಿಂದ ಮನುಷ್ಯನ ಮಲಮೂತ್ರಾದಿಗಳು ಭೂಮಿಯ ಮೇಲೆ ನೊಣಗಳಿಗೆ ಸಿಕ್ಕುವಂತೆ ಬಿಡಬಾರದು. ಅಲ್ಲದೆ ಕೆಲವು ಜನರ ಮಲದಿಂದ ವಿಸರ್ಜಿಸಲ್ಪಡುವ ಜಂತು ಹುಳದ ಸಣ್ಣ ಮರಿಗಳು ಮತ್ತು ಮೊಟ್ಟೆಗಳು ಭೂಮಿಯನ್ನು ಅಸಹ್ಯಗೊಳಿಸುವುದಲ್ಲದೆ ಮತ್ತೆ ಬೇರೆ ಮನುಷ್ಯರ ಹೊಟ್ಟೆ ಗಳಿಗೆ ಸೇರಿ ಅವುಗಳು ಅಲ್ಲಿ ಬೆಳೆಯುವ ಅವಕಾಶವಿದೆ. ಆದು ದರಿಂದ ಮಲಮೂತ್ರಗಳು ಭೂಮಿಯನ್ನು ಅಸಹ್ಯ ಪಡಿಸುವು ದಕ್ಕಾಗಲೀ ಅಥವಾ ನೊಣಕ್ಕೆ ಸಿಕ್ಕುವಂತಾಗಲೀ ಇರಬಾರದು. ಶುದ್ಧವಾದ, ಆರೋಗ್ಯಕರವಾದ ವಾತಾವರಣವನ್ನು ಕಲ್ಪಿಸ ಬೇಕಾದರೆ, ಎಲ್ಲಿಯೂ ಕಸಕಡ್ಡಿಗಳ ರಾಸಿಯಾಗಲೀ ಅಥವಾ ಮಲಮೂತ್ರಗಳ ಸುಳಿವಾಗಲೀ ಕಣ್ಣಿಗೆ ಕಾಣಿಸದಂತಿರಬೇಕು.

(೧) **ಒಳಚರಂಡಿ ವ್ಯವಸ್ಥೆ:** ಮನುಷ್ಯನ ಮಲಮೂತ್ರಗಳ
ನೀರು ಮತ್ತು ಮಣ್ಣಿಗೆ ಸೇರಿ ಅವುಗಳನ್ನು ಕೆಡಿಸದಂತೆಯೂ
ನೊಣಗಳ ಕೈಗೆ ಸಿಕ್ಕದಂತೆಯೂ ಮಾಡಬೇಕಾದರೆ ಅವುಗಳನ್ನು
ಸೇರಿಸಿ ಮುಚ್ಚಿದ ಸೋರದ ಪೈಪುಗಳ ಮೂಲಕ ರವಾನಿಸುವುದ
ರಿಂದ ಸಾಧ್ಯವಾಗುತ್ತದೆ. ಇಂಡಿಯಾದಲ್ಲಿರುವ ೧ ಲಕ್ಷಕ್ಕಿಂತ
ಹೆಚ್ಚು ಜನ ಸಂಖ್ಯೆಯಿರುವ ೪೮ ಪಟ್ಟಣಗಳ ಪೈಕಿ ೨೩ ಪಟ್ಟ
ಣಗಲ್ಲಿ ಮಾತ್ರ ಒಳಚರಂಡಿ ವ್ಯವಸ್ಥೆ ಇದೆ. ಇವುಗಳಲ್ಲಿಯೂ
ಶೇಕಡಾ ೩೩ರಿಂದ ೭೫ರ ವರೆಗೆ ವಾಸದ ಮನೆಗಳು, ಒಳಚರಂಡಿ
ವ್ಯವಸ್ಥೆಗೆ ಸೇರಿವೆ. ೧೯೫೧ರಲ್ಲಿದ್ದ ಇಂಡಿಯಾದ ೩೬೦ ದಶ
ಲಕ್ಷ ಜನರಲ್ಲಿ ಕೇವಲ ೧೦ ದಶಲಕ್ಷ ಜನರಿಗೆ ಮಾತ್ರ ಒಳಚ
ರಂಡಿಯ ಸೌಕರ್ಯವಿತ್ತು. ಸದ್ಯಕ್ಕೆ ಈ ಕೆಳಕಂಡ ಸೂತ್ರ
ಗಳನ್ನು ಅನುಸರಿಸಿ ಪ್ರದೇಶ ಮತ್ತು ಕೇಂದ್ರ ಸರ್ಕಾರದವರು
ಒಳಚರಂಡಿ ವ್ಯವಸ್ಥೆಯನ್ನು ಪಂಚವಾರ್ಷಿಕ ಯೋಜನೆಗೆ ಒಳ
ಪಡಿಸಿದ್ದಾರೆ. ಅವು ಯಾವುವೆಂದರೆ:—

(೧) ಈಗಿರುವ ಒಳಚರಂಡಿ ವ್ಯವಸ್ಥೆಯನ್ನು ಉತ್ತಮ
ಪಡಿಸುವುದು. ಶುದ್ಧಗೊಳಿಸುವ ಮತ್ತು ವಿಸರ್ಜಿಸುವ ಕ್ರಮ
ಗಳನ್ನು ಮತ್ತು ಯಂತ್ರಗಳನ್ನು ಈಗಿನ ಆಧುನಿಕ ಪರಿಸ್ಥಿತಿಗೆ
ತಕ್ಕಂತೆ ಅಳವಡಿಸುವುದು.

(೨) ಒಳಚರಂಡಿ ವ್ಯವಸ್ಥೆ ಇಲ್ಲದ ಮನೆಗಳಿಗೆ ಆ ಸೌಕರ್ಯ
ವನ್ನು ಒಳಚರಂಡಿ ಇರುವ ನಗರಗಳಲ್ಲಿ ಕಲ್ಪಿಸುವುದು.

(೩) ಮುಖ್ಯವಾದ ತೀರ್ಥಕ್ಷೇತ್ರಗಳು ಇರುವ ಕಡೆಗಳಲ್ಲೆಲ್ಲಾ
ಒಳಚರಂಡಿ ವ್ಯವಸ್ಥೆ ಏರ್ಪಡಿಸುವುದು.

(೪) ೧ ಲಕ್ಷಕಿಂತ ಹೆಚ್ಚು ಜನಸಂಖ್ಯೆ ಇರುವ ನಗರಗಳ

ಲ್ಲೆಲ್ಲಾ ಒಳಚರಂಡಿ ವ್ಯವಸ್ಥೆ ಏರ್ಪಡಿಸುವ ಯೋಜನೆಗೆ ಸೇರಿಸುವುದು.

(೫) ಕೈಗಾರಿಕಾನಗರಗಳಲ್ಲೆಲ್ಲಾ ಒಳಚರಂಡಿ ವ್ಯವಸ್ಥೆ ಇರುವಂತೆ ಯೋಜನೆಗೆ ಸೇರಿಸಿದ್ದಾರೆ.

ಈ ಮೇಲ್ಕಂಡ ವ್ಯವಸ್ಥೆಗೆ ಇಂಡಿಯಾ ದೇಶಕ್ಕೆ ಸುಮಾರು ೧೫ ಕೋಟಿ ರೂಪಾಯಿಗಳು ಪ್ರತಿ ವರ್ಷವೂ ಖರ್ಚಾಗಬಹುದು.

ಒಳಚರಂಡಿ ವ್ಯವಸ್ಥೆಯ ಯೋಜನೆಯನ್ನು ತಯಾರಿಸಬೇಕಾದರೆ, ಈ ಕೆಳಕಂಡ ಅಂಶಗಳನ್ನು ಗಮನಿಸಬೇಕು.

(೧) ಮೊದಲು ಮಲಮೂತ್ರಗಳನ್ನು ವಿಸರ್ಜಿಸುವ ಅಥವಾ ಶುದ್ಧೀಕರಿಸುವ ಸ್ಥಳವನ್ನು ಗೊತ್ತುಪಡಿಸಬೇಕು ಹಾಗೆ ಗೊತ್ತುಪಡಿಸಿದ ಸ್ಥಳವನ್ನು ಯಾವ ಕಾರಣಕ್ಕಾಗಿಯಾಗಲೀ ಬದಲಾಯಿಸಬಾರದು.

(೨) ವಿಸರ್ಜಿಸುವ ಸ್ಥಳದಿಂದ ಚರಂಡಿಯನ್ನು ಕಟ್ಟುತ್ತಾ ಬಂದು ಆ ಸ್ಥಳದಿಂದ ಜನರಿಗೆ ಒಳಚರಂಡಿ ಸೌಕರ್ಯವನ್ನು ಕೆಲಸದ ಪ್ರಾರಂಭದಿಂದಲೇ ದೊರಕಿಸಿಕೊಡಬೇಕು.

(೩) ಮುಖ್ಯ ಒಳಚರಂಡಿ ಪೈಪುಗಳು ಮತ್ತು ಕವಲುಪೈಪುಗಳನ್ನು ಎಲ್ಲೆಲ್ಲಿ ಮನೆಗಳ ನಿರ್ಮಾಣ ಪ್ರಾರಂಭವಾಗಿದೆಯೋ ಅಲ್ಲೆಲ್ಲಾ ಭೂಮಿಯ ಒಳಗಡೆ ಹಾಕಬೇಕು.

(೪) ಯೋಜನೆಗಳನ್ನು ತಯಾರಿಸಬೇಕಾದರೆ ಹಂತಗಳಲ್ಲಿ ತಯಾರಿಸಬೇಕು. ಹಾಗೆ ಮಾಡುವುದರಿಂದ ಪ್ರಾರಂಭದಲ್ಲಿ ಖರ್ಚು ಅತಿ ಹೆಚ್ಚಿಲ್ಲದೆ, ನಗರ ಬೆಳೆದಂತೆಲ್ಲಾ ಹಣ ವಿನಿಯೋಗಿಸಿ, ಪೂರ್ಣ ಪ್ರಯೋಜನವನ್ನು ಮೊದಲಿನಿಂದಲೂ

ಪಡೆಯಬಹುದು.

(೫) ವಿಸರ್ಜಿಸುವ ವಿಧಾನ ಅಥವಾ ಶುದ್ಧೀಕರಿಸುವ ವಿಧಾನ ವನ್ನು, ಒಳಚರಂಡಿ ಪೈಪುಗಳನ್ನು ನೆಲದಲ್ಲಿ ಹಾಕುವ ಮೊದಲೆ ಯೋಚಿಸಬೇಕಲ್ಲದೆ, ಅನಂತರವಲ್ಲ. ಮಳೆ ನೀರನ್ನು ಒಯ್ಯುವ ಒಳಚರಂಡಿಯ ಯೋಜನೆಯನ್ನು, ಮಲ ಮೂತ್ರಗಳನ್ನು ಒಯ್ಯುವ ಒಳ ಚರಂಡಿಯನ್ನು ನಿರ್ಮಾಣಮಾಡಿದ ನಂತರ ತೆಗೆದುಕೊಳ್ಳಬಹುದು. ಸಾಧಾರಣವಾಗಿ ಇವೆರಡೂ ಬೇರೆಬೇರೆ ಯಾಗಿದ್ದರೆ, ಒಳ್ಳೆಯದು. ಮಲಮೂತ್ರಗಳನ್ನು ಒಯ್ಯುವ ಒಳಚರಂಡಿಯ ಯೋಜನೆಯನ್ನು ತಯಾರಿಸುವ ಮೊದಲು ಅ ಪಟ್ಟಣದಲ್ಲಿ ಸಾಕಷ್ಟು ನೀರು ಸರಬರಾಜು ಇದೆಯೆ ಎಂದು ಗಮನಿಸಬೇಕು. ಇಲ್ಲವಾದಲ್ಲಿ ಅಥವಾ ಕೆಲವೇ ಗಂಟೆಗಳು ನೀರು ಸರಬರಾಜು ಇದ್ದರೆ ಅಂತಹ ಕಡೆ ಒಳಚರಂಡಿ ಪೈಪುಗಳು ಕಟ್ಟಿಕೊಂಡು ಸರಿಯಾಗಿ ಅದರ ವಿನಿಯೋಗವಾಗದೇ ಹೋಗ ಬಹುದು.

ನೀರು ಸರಬರಾಜು ವ್ಯವಸ್ಥೆಯಂತೆ, ಈ ವ್ಯವಸ್ಥೆಯನ್ನೂ ಕೊನೆಯಪಕ್ಷ ೩೦ ವರ್ಷಗಳ ಉಪಯೋಗವನ್ನು ಪಡೆಯುವಂತೆ ಯೋಜನೆಯನ್ನು ತಯಾರಿಸಬೇಕು. ಹಾಗೆ ತಯಾರಿಸುವಾಗ ಜನಸಂಖ್ಯೆ, ನೀರು ಸರಬರಾಜಿನ ಎಷ್ಟು ಭಾಗ ಒಳಚರಂಡಿ ಸೇರುತ್ತೆ ಎಂಬುದು, ಗೊತ್ತುಗುರಿಯಿಲ್ಲದ ಮಳೆಯ ನೀರು, ಭೂಮಿಯ ಒಳಗಿನ ಜಲಪ್ರವಾಹ ಮೊದಲಾದವು ಸುಮಾರು ಎಷ್ಟು ಭಾಗ ಸರಿಯಿಲ್ಲದ ಪೈಪು ಜಾಯಿಂಟ್‌ಗಳ ಮೂಲಕ ಸೇರುತ್ತದೆಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕು.

ಸ್ವತಃ ಪೈಪನ್ನು ಶುದ್ಧವಾಗಿಡುವಂಥ ಗಲೀಜು ನೀರಿನ ಓಟವ

ಸೆಕೆಂಡಿಗೆ ೨ ಅಡಿಗಳಿಗಿಂತ (೦.೬ ಮೀ) ಕಡಿಮೆ ಇರಬಾರದು. ಅದು ಸಾಧ್ಯವಾಗದ ಕಡೆ "ಫ್ಲಷಿಂಗ್ ಟ್ಯಾಂಕು" ಗಳನ್ನು ಕಟ್ಟಬೇಕು.

## ಬಚ್ಚಲು ಮತ್ತು ಅಡಿಗೆಮನೆಯ ನೀರನ್ನು ಒಯ್ಯುವ ಚರಂಡಿಗಳು

ಈ ಚರಂಡಿಗಳನ್ನು ಬಚ್ಚಲುಮನೆಯ ನೀರಿಗಲ್ಲದೆ ಮಳೆ ನೀರು ಸಾಗಿಸಲೂ ಉಪಯೋಗಿಸಬಹುದು. ಇವುಗಳು ಸಾಧಾರಣವಾಗಿ ಅರ್ಧಚಂದ್ರಾಕಾರದ ಪೈಪುಗಳಿಂದಲೋ, ೨ ಚಪ್ಪಡಿಗಳನ್ನು "V" ಆಕಾರದಲ್ಲಿರುವಂತೆಯೊ ಅಥವಾ ಸೈಜುಗಲ್ಲುಗಳಿಂದ "U" ಆಕಾರದಲ್ಲೊ ಅಥವಾ ಇನ್ನೂ ಬೇರೆ ಯಾವುದಾದರೂ ಆಕಾರದಲ್ಲೊ ಕಟ್ಟಬಹುದು. ಈ ರೀತಿಯ ಚರಂಡಿಗಳನ್ನು ನಾವು ಹಳ್ಳಿಗಳಲ್ಲೂ ಮತ್ತು ಪಟ್ಟಣಗಳಲ್ಲಿಯೂ ನೋಡಬಹುದು. ಆದರೆ ಇವುಗಳನ್ನು ಬಹಳ ಕಡೆ ಜನರು ಮಲಮೂತ್ರಗಳ ವಿಸರ್ಜನೆಗೂ ಉಪಯೋಗಿಸಿಕೊಂಡಿದ್ದಾರೆ.

ಈ ಮೇಲ್ಕಂಡ ಚರಂಡಿಗಳಿಗೆ ತಕ್ಕಷ್ಟು ಜಲಪ್ರವಾಹ ಬರದೇ ಇರುವುದರಿಂದ ಅವು ಕಟ್ಟಿಕೊಳ್ಳುತ್ತವೆ. ಸಾಧಾರಣವಾಗಿ ಈ ಚರಂಡಿಗಳ ಅಗಲ ೬ ಅಂಗುಲಗಳಿಗಿಂತ (೧೫ ಸೆ. ಮೀ) ಹೆಚ್ಚು ಇರುತ್ತವೆ. ಮತ್ತೆ ರಸ್ತೆಯ ವಾಟದಷ್ಟೇ ಚರಂಡಿಗಳಿಗೂ ಕೊಡುತ್ತಾರೆ. ಆದರೆ ಈ ಚರಂಡಿಯಲ್ಲಿ ಜಲಪ್ರವಾಹವು ಕಡಿಮೆಯಾದ್ದರಿಂದ ಮತ್ತು ರಸ್ತೆಯ ಮಟ್ಟಕ್ಕೆ ಇರುವುದರಿಂದ ಕಸಕಡ್ಡಿಗಳು, ಮಣ್ಣು, ಎಲೆ ಮೊದಲಾದುವುಗಳಿಂದ ಅಡಚಣೆಯುಂಟಾಗಿ ಚರಂಡಿಯಲ್ಲಿ ಗಲೀಜು ನೀರು ಮುಂದಕ್ಕೆ ಹೋಗು

ವುದೇ ಕಷ್ಟವಾಗುತ್ತದೆ. ಅದರಲ್ಲೂ ಬೇಸಿಗೆ ಕಾಲದಲ್ಲಿ ನೀರು ಒಂದೇ ಕಡೆ ನಿಂತು, ನೊಣಗಳ ಆವಾಸಸ್ಥಾನವಾಗಿ ದುರ್ವಾಸನೆಯಿಂದ ಕೂಡಿರುತ್ತೆ. ಈ ಚರಂಡಿಗಳ ಕೊನೆಯು ಒಂದು ಗಲೀಜು ನೀರಿನ ಕೊಳ್ಳವಾಗಿ, ಫೈಲೇರಿಯಾ, ಡೇಂಗೂಜ್ವರ ಮೊದಲಾದುವನ್ನು ಉಂಟುಮಾಡುವ ಸೊಳ್ಳೆಗಳ ಹೆರಿಗೆ ನಿಲಯವಾಗುತ್ತದೆ. ಆದುದರಿಂದ ಬಚ್ಚಲು ಮತ್ತು ಅಡಿಗೆ ಮನೆಯ ನೀರನ್ನು ಮನೆಯ ಹಿಂದುಗಡೆ ಏನಾದರೂ ಖಾಲಿ ಸ್ಥಳವಿದ್ದರೆ ಅಲ್ಲಿ ಒಂದು ಹಳ್ಳವನ್ನು ತೋಡಿ, ಭೂಮಿ ಹೀರಿಕೊಳ್ಳುವುದಕ್ಕೆ ಬಿಡುವುದು, ಚರಂಡಿಗೆ ಬಿಡುವುದಕ್ಕಿಂತ ಉತ್ತಮ ಮಾರ್ಗ. ಆಗ ಚರಂಡಿಯಲ್ಲಿ ಮಳೆಯ ನೀರು ಮಾತ್ರ ಹೋಗುವುದರಿಂದ ಗಲೀಜು ಮತ್ತು ವಾಸನೆಗಳಿರುವುದಿಲ್ಲ. ಅಲ್ಲದೆ ಸಾಂಕ್ರಾಮಿಕ ರೋಗಗಳು ಹರಡುವುದಕ್ಕೂ ಅಷ್ಟು ಆಸ್ಪದವಿರುವುದಿಲ್ಲ.

ಮುಚ್ಚಿರದ ಬಚ್ಚಲು ನೀರಿಗಾಗಿ ಮಾಡುವ ಈ ಚರಂಡಿಗಳನ್ನು ಸಾಧ್ಯವಾದ ಕಡೆಗಳಲ್ಲೆಲ್ಲಾ ಮುಚ್ಚಿಮಾಡಬೇಕು. ಈ ಚರಂಡಿಗಳು ಅವಶ್ಯಕವಾದಲ್ಲಿ ಅವುಗಳ ಯೋಜನೆಯನ್ನು ಸರಿಯಾದ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಮೂಲಕ ತಯಾರಿಸಬೇಕು. ಸಿಗುವ ವಾಟಗಳನ್ನು ಸರಿಯಾದ ರೀತಿ ಉಪಯೋಗಿಸಿಕೊಂಡು, ಆ ನೀರನ್ನು ವಿಸರ್ಜಿಸುವ ಸ್ಥಳವನ್ನು ಆರಿಸಿ, ವಿಸರ್ಜಿಸುವ ವಿಧಾನವನ್ನು ಯೋಚಿಸಿ ಯೋಜನೆಯನ್ನು ತಯಾರಿಸಿ ಆತನು ನಿರ್ಮಾಣ ಮಾಡಬಲ್ಲನು. ನಿರ್ಮಾಣವಾದನಂತರ ಆ ಚರಂಡಿಗಳಲ್ಲಿ ಗಲೀಜು ನೀರು ನಿಲ್ಲದಂತೆ ಪ್ರತಿದಿನ ಗುಡಿಸುವ ಏರ್ಪಾಡನ್ನು ಮಾಡಬೇಕು.

## ಮಲಮೂತ್ರ ಮತ್ತು ಬಚ್ಚಲು ನೀರನ್ನು ವಿಸರ್ಜಿಸುವ ವಿಧಾನ

ಈ ಗಲೀಜು ನೀರನ್ನು ಮನೆಯಿಂದ ಆಚೆಗೆ ಅಥವಾ ಊರಿನಿಂದ ಆಚೆಗೆ ಸಾಗಿಸಿದರೆ ಮಾತ್ರ ನಮ್ಮ ಕೆಲಸ ಮುಗಿದಹಾಗೆ ಆಗುವುದಿಲ್ಲ. ಇವುಗಳು ಜನರನ್ನು ತೊಂದರೆಗೆ ಈಡುಮಾಡದಂತೆ ತಕ್ಕ ರೀತಿ ವಿಸರ್ಜಿಸಬೇಕು. ಇಲ್ಲವಾದಲ್ಲಿ ಇವು ರೋಗಗಳಿಗೆ ಕಾರಣಭೂತವಾಗುವುದಲ್ಲದೆ, ಜನರ ದೃಷ್ಟಿಗೆ ಮತ್ತು ನಾಸಿಕಕ್ಕೆ ಅಸಹ್ಯವನ್ನು ಉಂಟುಮಾಡುತ್ತವೆ. ಯಾವ ರೀತಿ ವಿಸರ್ಜನೆ ಮಾಡಬೇಕೆಂಬುದು ಜನಾರೋಗ್ಯ ಇಂಜನಿಯರ್ ಅಥವಾ ಶಿಲ್ಪಿಯು ನಿರ್ಣಯಿಸಬೇಕು. ಆದುದರಿಂದ ಅಂಥ ಕೆಲಸ ಪ್ರಾರಂಭ ಮಾಡುವುದಕ್ಕೆ ಮೊದಲೇ ಯೋಚಿಸಿ ತದನಂತರವೇ ಚರಂಡಿಗಳನ್ನು ನಿರ್ಮಾಣ ಮಾಡುವುದಕ್ಕೆ ಹಣವ್ಯಯ ಮಾಡಬೇಕು. ವಿಸರ್ಜಿಸುವ ವಿಧಾನವು ಕಡಿಮೆ ಖರ್ಚಿನದಾಗಿಯೂ ಮತ್ತು ಜನಾರೋಗ್ಯಕ್ಕೆ ತೊಂದರೆಯಾಗದಂತೆಯೂ ಇರಬೇಕು.

ಯಾವಾಗ ? ಎಲ್ಲಿ ? ನೀರಿನೊಂದಿಗೆ ಎಂದರೆ ಸಮುದ್ರಕ್ಕೋ ಅಥವಾ ಸದಾ ಹರಿಯುವ ಭಾರಿನದಿಗೆ ಮೇಲ್ಕಂಡ ಗಲೀಜು ನೀರನ್ನು ಬಿಡಲು ಸಾಧ್ಯವೋ ಆಗ ಆ ವಿಧಾನವನ್ನು ಅನುಸರಿಸಬೇಕು. ಹಾಗೆ ಅನುಸರಿಸುವ ಮೊದಲು ಗಲೀಜು ನೀರಿನಲ್ಲಿರುವ ಬಟ್ಟೆ, ಕಾಗದ, ಕಡ್ಡಿ ಮೊದಲಾದುವುಗಳನ್ನು ಸ್ಕ್ರೀನ್ ಮೂಲಕ ಮಣ್ಣು ಮರಳು ಮೊದಲಾದವುಗಳನ್ನು ಅದಕ್ಕಾಗಿ ಏರ್ಪಡಿಸುವ ಟ್ಯಾಂಕುಗಳ ಮೂಲಕ ಬೇರ್ಪಡಿಸಬೇಕು. ನೀರಿನಲ್ಲಿ

ವಿಸರ್ಜಿಸಬೇಕಾದಾಗ ತಕ್ಕುವಾಗಿ ಗೊತ್ತಾದ ಮತ್ತು ಆಳವಾದ ಸ್ಥಳಗಳನ್ನು ಮೊದಲೇ ಗೊತ್ತುಪಡಿಸಿರಬೇಕು. ಏಕೆಂದರೆ ಬೇಸಗೆಯಲ್ಲಿ ಪ್ರವಾಹವು ಅಥವಾ ಅಲೆಗಳು ಕಡಿಮೆ ಇರುವುದರಿಂದ ವಿಸರ್ಜಿಸಿದ ಗಲೀಜು ಮತ್ತೆ ದಡಕ್ಕೆ ಬಂದು ಪಂಚೇಂದ್ರಿಯಗಳಿಗೆ ಅಸಹ್ಯವನ್ನುಂಟುಮಾಡಬಹುದು. ಗಲೀಜು ನೀರನ್ನು ಬೆರೆಸುವುದು ದೊಡ್ಡ ನದಿಗಾದರೆ ಎಲ್ಲಿ? ಎಷ್ಟು ಆಳದಲ್ಲಿ? ಬಿಡಬೇಕು ಅಥವಾ ಸಮುದ್ರಕ್ಕಾದರೆ ತೀರದಿಂದ ಎಷ್ಟು ದೂರದಲ್ಲಿ ಬಿಡಬೇಕು, ಎಂಬುದನ್ನು ನಾವು ಮೊದಲೇ ಗಲೀಜು ನೀರಿನ ಪ್ರಮಾಣ, ಗುಣ, ಲಕ್ಷಣ ಮತ್ತು ನದಿಯ ಬೇಸಿಗೆ ಪ್ರವಾಹ, ಅಥವಾ ತೀರದಿಂದ ಸಮುದ್ರಕ್ಕಿರುವ ವಾಟ ಅಥವಾ ಆಳ ಮೊದಲಾದುವನ್ನು ಗಮನಿಸಿ ನಿರ್ಧರಿಸಬೇಕು. ಹಾಗೆ ವಿಸರ್ಜಿಸಿದ ಮೇಲೆ, ಅದು ಗಾಳಿಯಿಂದ ದೊರಕುವ ಆಮ್ಲ ಜನಕದಿಂದ ಮತ್ತು ಸ್ವತಃ ಶುದ್ಧವಾಗುವ ವಿಧಾನಗಳಿಂದ ಎಷ್ಟರಮಟ್ಟಿಗೆ ಶುದ್ಧವಾಗಬಹುದೆಂಬುದನ್ನೂ ಚೆನ್ನಾಗಿ ಆಲೋಚಿಸಬೇಕು.

ಸಮುದ್ರ ಅಥವಾ ದೊಡ್ಡ ನದಿಗಳಿಂದ ದೂರವಾಗಿರುವ ನಗರ ಗಳಿಗೆ, ನೀರಿಗೆ ಗಲೀಜುನೀರನ್ನು ಬೆರೆಸುವ ವಿಧಾನವು ಸಾಧ್ಯವಿಲ್ಲ. ಅಂತಹ ಕಡೆ ಮಲಮೂತ್ರಗಳಿಂದ ಕೂಡಿದ ಗಲೀಜು ನೀರನ್ನು ವಿಶಾಲವಾದ ಮೈದಾನದ ಮೇಲೆ ಹೀರಿಕೊಳ್ಳುವುದಕ್ಕೆ ಬಿಡಬೇಕು. ಹಾಗೆ ಬಿಡುವುದಕ್ಕೆ ಮೊದಲು ಮರಳು ಮಣ್ಣು ಮೊದಲಾದುವುಗಳನ್ನೂ, ಕಸಕಡ್ಡಿ, ಬಟ್ಟೆ ಮೊದಲಾದುವುಗಳನ್ನೂ ಬೇರ್ಪಡಿಸಬೇಕು. ಅಲ್ಲದೆ ಗಲೀಜು ನೀರು ಸರಿಯಾಗಿ ರಂಧ್ರಗಳಿಲ್ಲದ ವಿಶಾಲವಾದ ಭೂಮಿಯ

ಮೇಲೆ ಬಿಡುವುದಕ್ಕೆ ಮೊದಲು ಕೆಲವು ಕಾಲ 'ಸೆಟ್ಲಿಂಗ್ ಟ್ಯಾಂಕ್'ಗಳ ಮೂಲಕ ಪ್ರವಹಿಸುವಂತೆ ಮಾಡಬೇಕು. ಅಂತಹ ಭೂಮಿಯ ಮೇಲೆ ಗಲೀಜು ನೀರನ್ನು ಉಪಯೋಗಿಸಿ ಕೊಂಡು ಹುಲ್ಲು, ಧಾನ್ಯ, ಹಸಿಯಾಗಿ ತಿನ್ನದ ತರಕಾರಿಗಳನ್ನು ಬೆಳೆಯುವುದಾದರೆ, ಭೂಮಿಯ ಲಕ್ಷಣವನ್ನು ನೋಡಿಕೊಂಡು ೧೦೦ರಿಂದ ೩೦೦ ಜನರ ಮಲಮೂತ್ರಗಳಿಂದ ಕೂಡಿದ ಗಲೀಜು ನೀರನ್ನು ಒಂದು ಎಕರೆಗೆ ಬಿಡಬಹುದು. ಈ ಸೂತ್ರದ ಮೇಲೆ ಗಲೀಜು ನೀರನ್ನು ಶುಚಿಯಾದ, ಆರೋಗ್ಯನಿಯಮಗಳನ್ನು ಅನುಸರಿಸಿದ ರೀತಿಯಲ್ಲಿ ವಿಸರ್ಜಿಸಬಹುದು ಮತ್ತು ಹುಲ್ಲು ಗಾವಲು ತೋಟ ಮೊದಲಾದುವುಗಳನ್ನು ಮಾಡಿ ಹಣವನ್ನೂ ಸಂಪಾದಿಸಬಹುದು.

ಮೇಲ್ಕಂಡ ರೀತಿ ವ್ಯವಸಾಯ ಮಾಡಬೇಕಾದರೆ ವ್ಯವ ಸಾಯ ಪ್ರವೀಣರೊಂದಿಗೆ ಆಲೋಚಿಸಿಮಾಡಬೇಕು. ಏಕೆಂದರೆ ಈ ವಿಧಾನದಿಂದ ನಾವು ಮಣ್ಣಿಗೆ ಕೊಡುವ ಸಾರಜನಕದ ಪ್ರ ಮಾಣವು ಎಕರೆಗೆ, ಸಾದಾರಣವಾಗಿ ಗೊಬ್ಬರದಿಂದ ದೊರಕುವ ಪ್ರಮಾಣಕ್ಕಿಂತ ೫ ರಿಂದ ೭ರಷ್ಟಾಗುತ್ತದೆ. ಆದುದರಿಂದ ಗಲೀ ಜುನೀರಿಗೆ ಬೆರಸಲು ನೀರು ಸಿಗುವುದಿದ್ದರೆ ಅಂತಹ ಬೆರಕೆಯ ನೀರಿನಿಂದ ಹೆಚ್ಚು ಉತ್ಪನ್ನವನ್ನು ಉಂಟುಮಾಡಲು ಸಾಧ್ಯ ವಾಗುತ್ತದೆ.

ಗಲೀಜು ನೀರಿನ ಶುದ್ಧೀಕರಣದಲ್ಲಿ ಯಾವಾಗ ಕಸಕಡ್ಡಿ, ಬಟ್ಟೆಬರೆಗಳಿಗೆ ತಡೆ ಇರುವುದೋ ಮಣ್ಣು ಮರಳು ಬೇರ್ಪಡಿ ಸುವ ವ್ಯವಸ್ಥೆ ಇದೆಯೋ ಮತ್ತು ಯಾವಾಗ 'ಸೆಟ್ಲಿಂಗ್ ಟ್ಯಾಂಕ್' ಗಳ ಮೂಲಕ ಗಲೀಜು ನೀರು ಪ್ರವಹಿಸುವುದೋ

ಆಗ ಮಣ್ಣು ಮರಳಿನ ಜೊತೆಯಲ್ಲಿ ಪ್ರಾಣಿ ಮತ್ತು ಸಸ್ಯ ಸಂಬಂಧವಾದ ವಸ್ತುಗಳು ಶೇಕಡಾ ೧೦-೧೫ ಕ್ಕಿಂತ ಹೆಚ್ಚಿಗೆ ನಿಲ್ಲದಂತೆ ನೋಡಿಕೊಳ್ಳಬೇಕು. ಕಸಕಡ್ಡಿ, ಬಟ್ಟೆಬರೆಗಳನ್ನು ಭೂಮಿಯಲ್ಲಿ ಹುದುಗಿಡಬೇಕು. 'ಸೆಟ್ಲಿಂಗ್ ಟ್ಯಾಂಕ್'ನ ಕೆಳಗಡೆ ನಿಲ್ಲುವ ವಸ್ತುವಾದ 'ಸ್ಲಡ್ಜ್' ಅದನ್ನು ಜೀರ್ಣ ಮಾಡುವ 'ಸ್ಲಡ್ಜ ಡೈಜಸನ್ ಟ್ಯಾಂಕ್' ಗಳಲ್ಲಿ ನಿಲ್ಲುವ ಹಾಗೆ ಮಾಡಬೇಕು. ಹಾಗೆ ಮಾಡಿದಲ್ಲಿ ಅದರ ಅಪಾಯಕಾರಿ ಅಸಹ್ಯ ಗುಣವು ಕಡಿಮೆಯಾಗುವುದಲ್ಲದೆ, ಅದರ ನೀರಿನಿಂದ ಕೂಡಿರುವ ಪ್ರಮಾಣವೂ ಕಡಿಮೆಯಾಗುವುದು. ಅಲ್ಲದೆ ಈ ವಿಧಾನದಿಂದ 'ಮಿತೇನ್' ಎಂಬ ಶಕ್ತಿ ಮತ್ತು ಶಾಖವನ್ನು ಉಂಟು ಮಾಡುವ ಅನಿಲವು ಉತ್ಪನ್ನವಾಗುವುದು. ಇದರ ಉಪಯೋಗವು ದೇಶದ ಶಕ್ತಿಯನ್ನು ಹೆಚ್ಚಿಸುವ ಒಂದು ವಿಧಾನವು.

ಇದುವರೆಗೆ ತಿಳಿಸಿದುದು ಪ್ರಾಥಮಿಕ ಶುದ್ಧೀಕರಣವಾಯಿತು. ಇನ್ನೂ ಹೆಚ್ಚು ಶುದ್ಧೀಕರಣವನ್ನು ಗಲೀಜು ನೀರಿಗೆ ಕೊಡಬೇಕಾದರೆ, ಅಂತಹ ಗಲೀಜು ನೀರನ್ನು "ಜಿನಗುವ ಫಿಲ್ಟರ್" ಗಳ ಮೂಲಕ ಪ್ರವಹಿಸುವಂತೆ ಮಾಡಬಹುದು. ಇವುಗಳ ಉಪಯೋಗ ನಮ್ಮ ದೇಶಕ್ಕೆ ಬಹಳ ಸಹಾಯ ಮಾಡಬಲ್ಲುದು. ಇಲ್ಲಿನ ಉಷ್ಣವಾಯುಗುಣವು ಗಲೀಜು ನೀರನ್ನು ಶುದ್ಧಿಗೊಳಿಸುವ ಕ್ರಿಮಿಗಳ ಬೆಳವಣಿಗೆಗೆ ಬಹಳ ಸಹಾಯ ಮಾಡುತ್ತದೆ. ಅಲ್ಲದೆ "ಜಿನುಗುವ ಫಿಲ್ಟರ್"ಗಳನ್ನು ತಯಾರುಮಾಡುವ ಮತ್ತು ಮೇಲ್ವಿಚಾರಣೆ ನೋಡಿಕೊಳ್ಳುವ ಖರ್ಚೇನೂ ಅಷ್ಟು ಹೆಚ್ಚಾಗಿರುವುದಿಲ್ಲ.

ಇನ್ನೂ ಹೆಚ್ಚಿನ ಗಲೀಜು ನೀರಿನ ಶುದ್ಧೀಕರಣಕ್ಕೆ "ಆಕ್ಟಿ

ವೇಟೆಡ್ ಸ್ಲಡ್ಜ" ಎಂಬ ವಿಧಾನವು ಹೆಚ್ಚು ತೃಪ್ತಿಕರ. ಇದರಲ್ಲಿ ಶುದ್ಧೀಕರಣ ಮಾಡುವ ಕ್ರಿಮಿಗಳಿಗೆ ಸರಿಯಾದ ವಾತಾವರಣವನ್ನು ಕಲ್ಪಿಸಿ, ಅವು ತಮ್ಮ ಸಂತತಿಯನ್ನು ಬೇಗ ಬೆಳಸಿಕೊಳ್ಳಲು ಸಹಾಯ ಮಾಡುವುದರಿಂದ ಗಲೀಜು ನೀರಿನ ಶುದ್ಧೀಕರಣವು ಬೇಗ ಆಗುವಂತೆ ಮಾಡಬಹುದು. ಅದಕ್ಕೋಸ್ಕರ ಬೇಕಾದ ಗಾಳಿಯು ಸರಬರಾಜು ಮತ್ತು ಗಾಳಿಯೊಂದಿಗೆ ಗಲೀಜು ನೀರಿನ ಸತತಮಿಶ್ರಣ ಬಹಳ ಮುಖ್ಯವಾದ ಕರ್ತವ್ಯಗಳು. ಈ ಯಾಂತ್ರಿಕ ಶುದ್ಧೀಕರಣವು ಸರಿಯಾದ ರೀತಿಯಲ್ಲಿ ಆಗಬೇಕಾದರೆ ಅದನ್ನು ನೋಡಿಕೊಳ್ಳುವ ಆಪರೇಟರುಗಳು ಸರಿಯಾದ ರೀತಿ ಕೆಲಸಮಾಡಬೇಕು. ಇಲ್ಲವಾದರೆ ಈ ವಿಧಾನವು ನಿಷ್ಪ್ರಯೋಜಕವಾಗುತ್ತದೆ.

ಇದೇ ರೀತಿಯಲ್ಲಿ ವಿವಿಧ ವಿಧಾನ ಕ್ರಮಗಳಲ್ಲಿ ಟ್ಯಾಂಕುಗಳ ಕೆಳಗಡೆ ಇರುವ "ಸ್ಲಡ್ಜ"ನ್ನು ಜೀರ್ಣಿಸುವ "ಸ್ಲಡ್ಜ ಡೈಜೆಸರ್" ಟ್ಯಾಂಕ್‌ಗಳಲ್ಲಿಯೂ ಶುದ್ಧೀಕರಣವಾಗುತ್ತದೆ. ಇದರಲ್ಲಿರುವ ಕ್ರಿಮಿಗಳೂ ಯೋಗ್ಯವಾದ ವಾತಾವರಣದಲ್ಲಿ ಚೆನ್ನಾಗಿ ಬೆಳೆದು ಶುದ್ಧೀಕರಣದ ಕೆಲಸವನ್ನು ಜಾಗ್ರತೆಯಾಗಿ ಮಾಡುತ್ತವೆ. ಅವುಗಳಿಗೆ ಆವಶ್ಯಕವಾದ ವಾತಾವರಣದಲ್ಲಿ ಏನಾದರೂ ಏರುಪೇರುಗಳಾದುವೆಂದರೆ, ಈ ವಿಧಾನವು ನಿಷ್ಪ್ರಯೋಜಕವಾಗುತ್ತದೆ.

ಬಹು ಸಣ್ಣ ಪಟ್ಟಣಗಳಿಗೆ ಅಥವಾ ದೊಡ್ಡ ಮನೆಗಳಿಗೆ ಅಥವಾ ಒಂದು ಗುಂಪು ಮನೆಗಳಿಗೆ 'ಸೆಪ್ಟಿಕ್' ಟ್ಯಾಂಕನ್ನು ಉಪಯೋಗಿಸಬಹುದು. ಈ ಟ್ಯಾಂಕಿನಲ್ಲಿ ಬಿಡಲ್ಪಡುವ ಮಲಮೂತ್ರಗಳಿಂದ ಕೂಡಿದ ಗಲೀಜುನೀರು, ಮೇಲಿನ ಭಾಗದಲ್ಲಿ

'ತಿಳಿ'ಯಾದುದನ್ನು ನೊರಜುಗಲ್ಲಿನಿಂದ ಕೂಡಿದ ಹಳ್ಳಕ್ಕೋ ಅಥವಾ ತೋಟಗಾರಿಕೆಯನ್ನು ಮಾಡುವುದಕ್ಕೋ ಉಪಯೋಗಿಸಬಹುದು. ಕೆಳಗೆ ನಿಲ್ಲುವ ಅರೆಜೀರ್ಣವಾದ ಗಸ್ಟನ್ನು ಅಥವಾ 'ಸ್ಲಡ್ಜ'ನ್ನು ಆಗಾಗ ಹೊರಗೆತೆಗೆದುಕೊಂಡು ಗೊಬ್ಬರದ ರೀತಿ'ಯಲ್ಲಿ ಉಪಯೋಗಿಸಿಕೊಳ್ಳಬಹುದು ಅಥವಾ "ಕಂಪೋಸ್ಟ್" ಮಾಡುವುದಕ್ಕೆ ಉಪಯೋಗಿಸಬಹುದು. ಈ ವಿಧಾನವನ್ನು ೫,೦೦೦ ಕ್ಕಿಂತ ಕಡಿಮೆ ಜನ ಇರುವ ಪಟ್ಟಣಗಳಿಗೆ ಮಾತ್ರ ಉಪಯೋಗವಾಗುವಂತೆ ಮಾಡಬಹುದು.

ಎರಡು ಅಂತಸ್ತುಗಳಿರುವ 'ಇಮ್‌ಹಾಫ್' ಟ್ಯಾಂಕನ್ನು ೧,೦೦೦ ದಿಂದ ೧೦,೦೦೦ ಜನ ಸಂಖ್ಯೆಯರುವ ಪಟ್ಟಣಗಳಿ ಉಪಯೋಗಕರವಾಗುವಂತೆ ಮಾಡಬಹುದು. ಈ ಟ್ಯಾಂಕ ಗಳಲ್ಲಿ ಮೇಲಿನ ಅಂತಸ್ತು ಸಾದಾ 'ಸೆಟ್ಲಿಂಗ್ ಟ್ಯಾಂಕ್'ನ ಕೆಲಸವನ್ನೂ ಮತ್ತು ಕೆಳಗಿನ ಅಂತಸ್ತು 'ಸ್ಲಡ್ಜ ಡೈಜೆಸನ್ ಟ್ಯಾಂಕ್‌ನ ಕೆಲಸವನ್ನೂ ಮಾಡುತ್ತವೆ. ಈ ರೀತಿಯ ಟ್ಯಾಂಕ ಗಳು ಪರದೇಶಗಳಲ್ಲಿ ಬಹಳ ಉತ್ತಮ ರೀತಿಯಲ್ಲಿ ಕೆಲ ಮಾಡುತ್ತಿವೆ. ಆದರೆ ನಮ್ಮ ದೇಶದಲ್ಲಿ ಕೆಲವು ಕಾರಣಗಳಿಂ ಇವುಗಳ ಉಪಯೋಗವನ್ನು ನಾವು ಪಡೆದುಕೊಂಡಿರುವುದಿಲ್ಲ.

ಒಳಚರಂಡಿಯ ವ್ಯವಸ್ಥೆಯ ಯೋಜನೆಯನ್ನು ತಯಾರಿಸ ವುದಕ್ಕೂ, ಸಾದಾ ಚರಂಡಿಗಳನ್ನು ಕಟ್ಟುವುದಕ್ಕೂ, ತದನಂತ ಮನೆಗಳಿಂದ ರಸ್ತೆಯ ಚರಂಡಿಗೆ ಸೇರಿಸುವುದಕ್ಕೂ, ಅನಂತ ಶುದ್ಧೀಕರಣ ಯಂತ್ರಗಳನ್ನು ಸ್ಥಾಪಿಸಿ ನಡಸುವುದಕ್ಕ ಬಹಳ ವರ್ಷಗಳಾಗುತ್ತವೆ. ಆದುದರಿಂದ ಈ ಕಾಲದಲ್ಲಾಗು ಹೆಚ್ಚಿನ ಜನ ಸಂಖ್ಯೆಯನ್ನು ಗಣನೆಯಲ್ಲಿ ಇಟ್ಟುಕೊಂ

ಯೋಜನೆಯನ್ನು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಮೂಲಕ ಹಂತಹಂತವಾಗಿ ತಯಾರಿಸಿ ನಿರ್ಮಾಣ ಮಾಡುವುದು ಒಳ್ಳೆಯ ವಿಧಾನ.

## ಕಸಕಡ್ಡಿಗಳ ಶುದ್ಧೀಕರಣ

ಕಸ ಕಡ್ಡಿಗಳ ಶೇಖರಣೆ ಸಾಗಿಸುವಿಕೆ ಮತ್ತು ವಿಸರ್ಜಿಸುವ ವಿಧಾನವು ಜನರ ಆರೋಗ್ಯವನ್ನು ಕೆಡಿಸದಂತೆ ನಡೆಯಬೇಕು. ಜನಾರೋಗ್ಯಕ್ಕೆ ಸಂಚಕಾರ ತರುವ ಶತ್ರುಗಳು ಯಾವುವೆಂದರೆ

(೧) ನೊಣಗಳ ಸಂಖ್ಯೆ ಹೆಚ್ಚುವಿಕೆ.

(೨) ಇಲಿಗಳ ಸಂಖ್ಯೆ ಹೆಚ್ಚುವಿಕೆ,

'ಕಂಪ್ರೋಸ್ಟಿಂಗ್' ಮೊದಲಾದ ಕ್ರಮಗಳಿಂದ ಕಸಕಡ್ಡಿಗಳನ್ನು ಉಪಯೋಗಿಸಿಕೊಂಡು, ಹಣ ಸಂಪಾದನೆ ಮಾಡಬೇಕಾದರೆ, ನೊಣ ಮತ್ತು ಇಲಿಗಳು ಹೆಚ್ಚದಂತೆ ನೋಡಿಕೊಳ್ಳಬೇಕು. ಇಲ್ಲವಾದರೆ ಜನಾರೋಗ್ಯಕ್ಕೆ ತೊಂದರೆಯಾಗುತ್ತದೆ. ಕಂಪ್ರೋಷ್ಟ ಮಾಡುವ ಹಲವು ವಿಧಾನಗಳಿವೆ. ಮೊದಲನೆಯ ವಿಧಾನದಲ್ಲಿ ಕಸಕಡ್ಡಿಗಳನ್ನು ಮಲದೊಂದಿಗೆ ಬೆರಸಿ ಭೂಮಿಯಲ್ಲಿ ತೋಡಿದ ಹಳ್ಳದಲ್ಲಿ ಮುಚ್ಚಿ, ಅದರ ಮೇಲೆ ಮಣ್ಣು ಮುಚ್ಚಿ ಸುಮಾರು ೩ ತಿಂಗಳ ಕಾಲ ಕೊಳೆಸುತ್ತಾರೆ. ತದನಂತರ ಅದನ್ನು ಗೊಬ್ಬರವಾಗಿ ಉಪಯೋಗಿಸುತ್ತಾರೆ. ಇದರಿಂದ ವ್ಯವಸಾಯದ ಉತ್ಪನ್ನವೂ ಹೆಚ್ಚುತ್ತದೆ. ಆದರೆ ಕಂಪ್ರೋಷ್ಟ ಜಾಗರೂಕತೆಯಿಂದ ಇಲಿ ಮತ್ತು ನೊಣಗಳ ಕೈಗೆ ಸಿಗದಂತೆ ಮಾಡಬೇಕು ಮತ್ತು ಊರಾಚೆ ಅರ್ಧ ಮೈಲಿಗಿಂತ ಹೆಚ್ಚು ದೂರದಲ್ಲಿ ಮಾಡಬೇಕು.

ಸಾಧಾರಣವಾಗಿ ಮನೆಗಳಿಂದ ಕಸಕಡ್ಡಿಗಳನ್ನು ಹೆಂಗಸರು, ಬೀದಿಯಲ್ಲಿರುವ ಕಸದ ತೊಟ್ಟಿಗಳಿಗೆ ಹಾಕುತ್ತಾರೆ. ಆದರೆ ಕೆಲವು ಕಡೆಗಳಲ್ಲಿ ಮಾತ್ರ, ಅಂದರೆ ಭಾರೀ ಮನೆಗಳಿಂದ ಮುನಿಸಿ ಪಾಲಿಟಿಯವರು ಪ್ರತಿಮನೆಗೆ ಬಂದು ಕಸಕಡ್ಡಿಗಳನ್ನು ತೆಗೆದು ಕೊಂಡು ಹೋಗುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದಾರೆ. ಸಾಧಾರಣವಾಗಿ ಮುನಿಸಿಪಾಲಿಟಿಯವರು ತಮ್ಮ ವಾಹನಗಳ ಮತ್ತು ಸಿಬ್ಬಂದಿಯ ಸಹಾಯದಿಂದ ಕಸದ ತೊಟ್ಟಿಗಳಲ್ಲಿ ಇರುವ ಕಸಕಡ್ಡಿಗಳನ್ನು ಸಾಗಿಸಿ ಊರ ಹೊರಗೋ ಅಥವಾ ಹೆಚ್ಚು ಜನ ಸಂಖ್ಯೆ ಇಲ್ಲದಿರುವ ತಗ್ಗಾದ ಪ್ರದೇಶಗಳಿಗೋ ತುಂಬುತ್ತಾರೆ. ಅಂತಹ ಪ್ರದೇಶಗಳ ಮೇಲೆ ತೋಟ ಮೊದಲಾದುವನ್ನು ಮಾಡ ಬಹುದು. ದೊಡ್ಡ ಪಟ್ಟಣಗಳಲ್ಲಿ ಕಸಕಡ್ಡಿಗಳನ್ನು ಸುಡುವುದು ಉತ್ತಮ ಮತ್ತು ಆರೋಗ್ಯನಿಯಮಗಳಗನುಸಾರವಾದ ವಿಧಾನ. ಒಂದು ಲಕ್ಷಕ್ಕಿಂತ ಹೆಚ್ಚು ಜನರು ವಾಸಿಸುವ ಕಡೆ ಕಂಪೋಸ್ಟ ವಿಧಾನವನ್ನು ಅನುಸರಿಸಬಾರದು.

ಕಸಕಡ್ಡಿಗಳ ಶುದ್ಧೀಕರಣ ಉತ್ತಮವಾಗಿ ನಡೆಯಬೇಕಾದರೆ ಪ್ರತಿ ಪ್ರಜೆಯೂ ನಿರ್ಮಲೀಕರಣದಲ್ಲಿ ತನ್ನ ಕರ್ತವ್ಯವನ್ನು ಪಾಲಿಸಬೇಕು ಮತ್ತು ಭಾಗವಹಿಸಬೇಕು. ಪ್ರಜೆ ತನ್ನ ಮನೆ ಮತ್ತು ಅಂಗಳವನ್ನು ಶುದ್ಧವಾಗಿಟ್ಟುಕೊಳ್ಳದಿದ್ದಲ್ಲಿ, ಇಡೀಊರೆ ಶುದ್ಧವಾಗಿರುವುದಿಲ್ಲ. ಆದುದರಿಂದ ಈ ದೇಶದ ಮುನಿಸಿ ಪಾಲಿಟಿಗಳವರು, ಪರದೇಶಗಳ ಮಾದರಿಯಲ್ಲಿ ಪ್ರತಿಮನೆಯಿಂದ ಕಸಕಡ್ಡಿಗಳನ್ನು ಸಾಗಿಸುವ ಏರ್ಪಾಡನ್ನು ಮಾಡಿದರೆ ಅಂತಹ ನಗರವು ಶುದ್ಧಗೊಳ್ಳುವುದರಲ್ಲಿ ಸಂದೇಹವಿಲ್ಲ. ಈ ವಿಧಾನ ದಿಂದ ಪ್ರತಿಮನೆಯ ಹೊರಗೆ ಒಂದು ಮುಚ್ಚಿದ ಕಸದತೊಟ್ಟಿ

ಯನ್ನು ಇಡಬೇಕಾಗುತ್ತದೆ. ಅದಕ್ಕೆ ಆ ಮನೆಯವರು ತಮ್ಮ ಮನೆಯ ಕಸಕಡ್ಡಿಗಳನ್ನು ತುಂಬಬೇಕು. ಮುನಿಸಿಪಾಲಿಟಿಯವರು ತಮ್ಮ ವಾಹನ ಮತ್ತು ಸಿಬ್ಬಂದಿಯ ಮೂಲಕ ಅದನ್ನು ಸಾಗಿಸಬೇಕು; ಈ ರೀತಿ ಮಾಡಿದರೆ ರೋಡಿನಲ್ಲಿ ಇಡಬೇಕಾದ ಕಸದ ತೊಟ್ಟಿಗಳ ಸಂಖ್ಯೆ ಕಡಿಮೆಯಾಗುವುದಲ್ಲದೆ; ರಸ್ತೆಗಳನ್ನು ತೊಳೆಯುವ ಅಥವಾ ಗುಡಿಸುವ ಕೆಲಸವೂ ಕಡಿಮೆಯಾಗುತ್ತದೆ.

ಕಸಕಡ್ಡಿಗಳನ್ನು ಒಯ್ಯುವ ವಾಹನಗಳು ಸಾಧಾರಣ ಲಾರಿಗಳಾಗಿರಬಾರದು. ಇದರಿಂದ ನಗರವು ಶುದ್ಧಿಯಾಗುವುದರ ಬದಲು, ಕಸಕಡ್ಡಿಗಳು ಹೊರಬಿದ್ದು ನಗರವು ಅಶುದ್ಧಿಯಾಗುವುದೂ ಸಾಧ್ಯವಿದೆ. ಆದುದರಿಂದ ವಾಹನಗಳನ್ನು ಮುನಿಸಿಪಾಲಿಟಿಯವರು ಕೊಳ್ಳುವ ಮೊದಲು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಅಭಿಪ್ರಾಯವನ್ನು ತೆಗೆದುಕೊಳ್ಳಬೇಕು. ಅಲ್ಲದೆ ವಾಹನಗಳ ಮತ್ತು ಆದರ ಸಿಬ್ಬಂದಿಯ ಮೇಲ್ವಿಚಾರಣೆಯನ್ನು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಗೆ ವಹಿಸಬೇಕು. ಈತನು ಪ್ರತಿವಾಹನ ಕಚಡಾವನ್ನು ತುಂಬಬೇಕಾದ ಅಳತೆ, ಮುಚ್ಚುವ ಸಾಧನ ಮೊದಲಾದಗುವುಳನ್ನು ಪರಿಶೀಲಿಸಿ ತನ್ನ ಅಭಿಪ್ರಾಯವನ್ನು ಕೊಡಬಲ್ಲನು.

ಒಂದು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆಯಿರುವ ನಗರಗಳಲ್ಲೆಲ್ಲಾ ಮುನಿಸಿಪಾಲಿಟಿಯ ಸ್ವಂತ ವಾಹನಗಳನ್ನು ರಿಪೇರಿ ಮಾಡುವ ವರ್ಕ್‌ಷಾಪ್ ಇರಬೇಕು. ಇದು ಬೇಕಾದರೆ ಹೊರಗಿನ ಕೆಲಸಗಳನ್ನೂ ತೆಗೆದುಕೊಳ್ಳುವಂತಿರಬೇಕು.

## ಒಳಚರಂಡಿ ಇಲ್ಲದ ಕಡೆ ಮಲಮೂತ್ರಗಳನ್ನು ಶೇಖರಿಸಿ ವಿಸರ್ಜಿಸುವ ವಿಧಾನ

ಇಡೀ ಇಂಡಿಯಾ ದೇಶದಲ್ಲಿ ಶೇಕಡಾ ೩ ಭಾಗ ಜನರಿ
ಮಾತ್ರ ಒಳಚರಂಡಿಯ ಸೌಕರ್ಯವಿದೆ. ಅದಿಲ್ಲದ ಕಡೆ ಮ
ವನ್ನು ಮಂಕರಿಗಳಲ್ಲಿ ಅಥವಾ ಡಬ್ಬಾಗಳಲ್ಲಿ ಶೇಖರಿಸಿ, ಪ್ರ
ದಿನವು ಅದಕ್ಕಾಗಿಯೇ ಇರುವ ಮುನಿಸಿಪಾಲಿಟಿಯ ಜನ
ಬಂಡಿಗಳಲ್ಲಿ ತುಂಬಿಕೊಂಡು ಹೋಗುತ್ತಾರೆ. ಈ ಮಾದರಿಯ
ಆರೋಗ್ಯ ನಿಯಮಗಳ ಪ್ರಕಾರ ತೃಪ್ತಿಕರವಲ್ಲ. ಈ ಮಾದ
ಯಲ್ಲಿ ಮೂತ್ರವನ್ನು ಬಚ್ಚಲಿಗೆ ಹರಿಯಲು ಬಿಡುತ್ತಾರೆ. ಇ
ಭೂಮಿಯ ಮೇಲೆ ಹರಿಯುವ ಚರಂಡಿಗೆ ಸೇರುತ್ತದೆ. ಇದರಿಂ
ಸಾಂಕ್ರಾಮಿಕ ರೋಗಗಳು ಹರಡಲು ಕಾರಣವಾಗುತ್ತದೆ.
ರೀತಿಯ ವಿಸರ್ಜನೆಯು ತೃಪ್ತಿಕರವಾಗಿ ನಡೆಯಬೇಕಾದರೆ ಹೆಚ
ಜನ ಸಿಬ್ಬಂದಿಯನ್ನು ಇಡಬೇಕು. ಆದರೆ ಈ ರೀತಿಯ ಕೆಲಸ
ಬರುವವರು ಈ ಆಧುನಿಕ ಕಾಲದಲ್ಲಿ ಬಹಳ ಕಡಿಮೆ. ಆರೋ
ನಿಯಮದಂತೆ, ಅಸಹ್ಯವಾಗದ ಹಾಗೆ ವಿಸರ್ಜನೆ ಮಾಡಿದ
ಆಗುವುದಿಲ್ಲ. ಆದುದರಿಂದ ಮನುಷ್ಯರ ಸಹಾಯವಿಲ್ಲದೆ ಸ್ವ
ವಾಗಿ, ಜನರ ಆರೋಗ್ಯಕ್ಕೆ ಕುಂದುಬಾರದ ಹಾಗೆ ವಿಸರ್ಜ
ಆಗುವ ಕಕ್ಕಸುಗಳನ್ನು ಕಟ್ಟುವುದು ಮೇಲು. ಈ ವಿಧಾನ
ಸುರಂಗ ಕಕ್ಕಸು (ಬೋರ್ ಹೋಲ್ ಕಕ್ಕಸು), ಹಗೇವು ಕಕ್ಕ
ಸೆಪ್ಟಿಕ್ ಟ್ಯಾಂಕ್ ಕಕ್ಕಸು ಮೊದಲಾದ ಮಾದರಿಗಳಿವೆ.

ಈ ಮಾದರಿಗಳಿಗೆ ಸ್ಥಳ ಸ್ವಲ್ಪ ಹೆಚ್ಚಿಗೆ ಬೇಕು. ಅ
ಕಕ್ಕಸುಗಳ ಸುತ್ತಮುತ್ತಲು ಸುಮಾರು ನೂರಡಿ ಸುತ್ತಳತೆಯ

ಕುಡಿಯುವ ನೀರಿನ ಭಾವಿ ಇರಕೂಡದು. ಸೆಪ್ಟಿಕ್ ಟ್ಯಾಂಕ್ನಿಂದ ಕೂಡಿದ ಕಕ್ಕಸು ಈ ಮೇಲ್ಕಂಡ ವಿಧಾನಗಳಲ್ಲಿ ಉತ್ತಮವಾದುದು. ಸೆಪ್ಟಿಕ್ ಟ್ಯಾಂಕ್‌ನ ಅಳತೆಯನ್ನು ಪ್ರತಿ ಮನುಷ್ಯನಿಗೆ ೫ ಗ್ಯಾಲನ್ನು (೨೫ ಲೀಟರ್) ಗಳಂತೆ, ಒಂದು ಸಂಸಾರದ ಅಥವಾ ಕಕ್ಕಸನ್ನು ಉಪಯೋಗಿಸುವ ಜನರ ಸಂಖ್ಯೆಯ ಮೇಲೆ ಅಳವಡಿಸಬೇಕು. ಈ ರೀತಿಯ ಕಕ್ಕಸುಗಳು ಹಳ್ಳಿಗಳಿಗೂ ಸಣ್ಣ ಪಟ್ಟಣಗಳಿಗೂ ಸರಿ ಹೊಂದುತ್ತವೆ. ಪ್ರತಿಯೊಂದು ಮನೆಗೂ ಒಂದು ಕಕ್ಕಸು ಕಟ್ಟುವಂತೆ ಸ್ಯಾನಿಟರಿ ಇನ್ಸ್ಪೆಕ್ಟರ್ ಮೂಲಕ ಜನರಿಗೆ ಪ್ರಚಾರವನ್ನು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಮೇಲ್ವಿಚಾರಣೆಯಲ್ಲಿ ನಡೆಯಬೇಕು. ಅಲ್ಲದೆ ಇವರಿಂದ ಸಾರ್ವಜನಿಕ ಕಕ್ಕಸುಗಳನ್ನು ನಿರ್ಮಾಣ ಮಾಡುವಿಕೆಯೂ ನಡೆಯಬೇಕು. ಸಾರ್ವಜನಿಕ ಕಕ್ಕಸುಗಳು ರೈಲ್ವೆ ಸ್ಟೇಷನ್ನುಗಳಲ್ಲಿಯೂ, ಬಸ್ ನಿಲ್ದಾಣಗಳಲ್ಲಿಯೂ, ಉದ್ಯಾನವನಗಳಲ್ಲಿಯೂ, ಮನರಂಜನೆ ನಡೆಯುವ ಸ್ಥಳಗಳಲ್ಲಿಯೂ, ಮಾರು ಕಟ್ಟೆಗಳಲ್ಲಿಯೂ, ಸ್ಕೂಲು ಕಾಲೇಜುಗಳಲ್ಲಿಯೂ, ಹಾಸ್ಟೆಲ್ ಧರ್ಮಛತ್ರಗಳಲ್ಲಿಯೂ, ಸರ್ಕಾರಿ ಆಫೀಸ್‌ಗಳಲ್ಲಿಯೂ, ದೇವರನ್ನು ಸಾರ್ವಜನಿಕವಾಗಿ ಪೂಜಿಸುವ ಕಡೆಗಳಲ್ಲಿಯೂ ಕಟ್ಟಲ್ಪಡಬೇಕು. ಜನ ಸೇರುವ ಕಡೆ ೨೦೦ ರಿಂದ ೪೦೦ ಜನರಿಗೊಂದರಂತೆ ಕಟ್ಟಿದರೆ ಸಾಕು. ಜನ ವಾಸಿಸುವ ಕಡೆ ೮ ರಿಂದ ೧೬ ಜನರಿಗೊಂದರಂತೆ ಕಟ್ಟಿದರೆ ಸಾಕು. ನೀರಿನ ಸರಬರಾಜು ಮತ್ತು ಡಿ. ಡಿ. ಟಿ. ಹೊಡೆಯುವುದು ಹಳ್ಳಿಯ ಜನರಿಗೆ ಬಹಳ ಪ್ರಿಯವಾಗಿದೆ. ಆದುದರಿಂದ ಅದರ ಜೊತೆಯಲ್ಲಿಯೇ ಪ್ರತಿಯೊಂದು ಮನೆಗೆ ಒಂದು ಕಕ್ಕಸು ಇರಬೇಕೆಂಬು

ದನ್ನು ಪ್ರಚಾರಮಾಡಬೇಕು.

**ಒಳಚರಂಡಿಗಳನ್ನು ಕಟ್ಟಲು ಬೇಕಾಗುವ ವಸ್ತುಗಳು**

ಈಗ ಇಂಡಿಯಾದಲ್ಲಿ ಸುಮಾರು ತಿಂಗಳಿಗೆ ೧೨೨೦ ಟನ್ನುಗಳಷ್ಟು ಪಿಂಗಾಣಿ ಪೈಪುಗಳು ತಯಾರಾಗುತ್ತಲಿವೆ. ಆದರೆ ನಮ್ಮ ದೇಶದ ಈಗಿನ ಯೋಜನೆಗಳು ಜಯಪ್ರದವಾಗಿ ನಡೆಯಬೇಕಾದರೆ ನಮಗೆ ತಿಂಗಳಿಗೆ ಸುಮಾರು ೩,೦೦೦ ಟನ್ನುಗಳಷ್ಟು ಪೈಪುಗಳು ಬೇಕು. ಈ ರೀತಿಯ ಯೋಜನೆಯ ಸುಮಾರು ಶೇಕಡಾ ೨೫ ಭಾಗ ವೆಚ್ಚವು ಪೈಪುಗಳಿಗಾಗುತ್ತದೆ. ಇದಲ್ಲದೆ ಸುಮಾರು ೪೦,೦೦೦ ದಿಂದ ೫೦,೦೦೦ ಟನ್ನುಗಳಷ್ಟು ಸೀಮೆಂಟು ಪ್ರತಿವರ್ಷವೂ ಬೇಕು. ಒಳಚರಂಡಿ ಮತ್ತು ಇದರ ಮೂಲಕ ಒಯ್ದ ಗಲೀಜನ್ನು ಶುದ್ಧೀಕರಿಸಿ ವಿಸರ್ಜನೆ ಮಾಡುವುದಕ್ಕೆ ಸಹಾಯಮಾಡುವ ಯಂತ್ರಗಳು, ಸಾಧಾರಣ ಚರಂಡಿಗಳು, ಕಕ್ಕಸುಗಳನ್ನು ಇಂಡಿಯಾದೇಶದವರು ತೆಗೆದುಕೊಳ್ಳಬೇಕಾದರೆ ಸುಮಾರು ಹತ್ತುಕೋಟಿ ರೂಪಾಯಿಗಳು ಪ್ರತಿವರ್ಷವೂ ಇದಕ್ಕಾಗಿ ಖರ್ಚಾಗಬೇಕು.

ಈ ಮೇಲ್ಕಂಡ ಕೆಲಸಗಳನ್ನೂ ಮತ್ತು ಯಂತ್ರಗಳದನ್ನೂ ತೃಪ್ತಿಕರವಾಗಿ ನಡೆಸಬೇಕಾದರೆ, ಆ ಕೆಲಸಗಳನ್ನೆಲ್ಲಾ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಗೆ ವಹಿಸಬೇಕು. ಮತ್ತು ಅವರ ಮೇಲ್ವಿಚಾರಣೆಯಲ್ಲಿ ಕೆಲಸಗಳು ನಡೆಯಬೇಕು.

## ೬ ಆಹಾರ, ಪಾನೀಯಗಳು ಮತ್ತು ಹಾಲು

ಈ ಮೇಲ್ಕಂಡ ವಸ್ತುಗಳ ತಯಾರಿಕೆ, ಶೇಖರಣೆ, ಸರಬರಾಜು ಮತ್ತು ವಿನಿಯೋಗ; ಎಂತಹ ವಾತಾವರಣದಲ್ಲಿ ನಡೆಯಬೇಕೆಂದರೆ, ಯಾವ ವಿಧವಾದ ಸಾಂಕ್ರಾಮಿಕ ರೋಗಗಳನ್ನು ಹರಡುವ ಕ್ರಿಮಿಗಳು ಸೇರಲೂ ಅವಕಾಶವಿರಕೂಡದು; ಮತ್ತು ಆ ವಸ್ತುಗಳ ಪುಷ್ಟಿದಾಯಕ ಪ್ರಮಾಣವು ಕಡಿಮೆಯಾಗಕೂಡದು. ತಿಂಡಿಯ ಮೂಲಕ ಹರಡುವ ಸಾಂಕ್ರಾಮಿಕ ರೋಗಗಳು ಹರಡಲು ಸಾರ್ವಜನಿಕ ಭೋಜನ ಶಾಲೆಗಳಿಗೆ ಅವಕಾಶವಿರುವಂತೆ ಮನೆಗಳಿಗೆ ಇಲ್ಲ. ಪಟ್ಟಣಗಳಲ್ಲಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಜನರು ಹೋಟೆಲ್, ಕ್ಯಾಂಟೀನು, ಮೊದಲಾದ ಸಾರ್ವಜನಿಕ ಭೋಜನಾಲಯಗಳನ್ನು ಹೆಚ್ಚು ಹೆಚ್ಚಾಗಿ ಉಪಯೋಗಪಡಿಸಿ ಕೊಳ್ಳುವುದರಿಂದ ಅವುಗಳ ಶುಚಿತ್ವ ಬಹಳ ಮುಖ್ಯ. ಹಳ್ಳಿಗಳಲ್ಲಿ ಇವುಗಳಿಗೆ ಅವಕಾಶ ಕಡಿಮೆ. ಹಳ್ಳಿಗಳಲ್ಲಿ ಸಾಂಕ್ರಾಮಿಕ ರೋಗಗಳು ಹರಡಬೇಕಾದರೆ ಸೊಳ್ಳೆ, ನೊಣ ಮತ್ತು ಇಲಿಗಳೇ ಕಾರಣ. ಆದರೆ ಹಳ್ಳಿಯ ಜನರು ಹಾಲು, ಮೀನು ಮತ್ತು ತರಕಾರಿಗಳನ್ನು ಅಶುಚಿಯಾಗಿ ಶೇಖರಿಸಿ ಪಟ್ಟಣಗಳಿಗೆ ತಂದು ಮಾರುವಾಗ ನಾವು ಎಚ್ಚರಿಕೆ ವಹಿಸಬೇಕು.

**ತಿಂಡಿ ಮತ್ತು ಪಾನೀಯಗಳನ್ನು ಮಾಡುವ ಸ್ಥಳಗಳು**

ಇವುಗಳು ಯಾವುವೆಂದರೆ, ಪ್ರಾಣಿಗಳನ್ನು ಕಡಿದು ಮಾಂಸವನ್ನು ತಯಾರಿಸುವ ಸ್ಥಳಗಳು, ಹಿಟ್ಟು ತಯಾರುಮಾಡುವ

ಸ್ಥಳಗಳು, ರೊಟ್ಟಿ ಬಿಸ್ಕತ್ತು ಮೊದಲಾದುವನ್ನು ಮಾಡುವ ಸ್ಥಳಗಳು, ಮಿಠಾಯಿ ಸಾಮಾನುಗಳನ್ನು ಮಾಡುವ ಸ್ಥಳಗಳು, ಐಸ್‌ಕ್ರೀಮ್ ಮತ್ತು ಹಾಲನ್ನು ಬಾಟಲಿಗೆ ಹಾಕುವ ಸ್ಥಳಗಳು, ಐಸ್, ಸೋಡ ಮೊದಲಾದುವನ್ನು ಮಾಡುವ ಸ್ಥಳಗಳು ಮತ್ತು ಹೋಟೆಲುಗಳು.

## ಪ್ರಾಣಿವಧೆ ಮಾಡುವ ಸ್ಥಳಗಳು

ಪ್ರಾಣಿಗಳನ್ನು ಕಡಿದು ಮಾಂಸವನ್ನು ತಯಾರಿಸುವುದನ್ನು ಜನಗಳ ಇಚ್ಛೆಗೆ ಎಂದೂ ಬಿಡಬಾರದು. ಈ ಕೆಲಸ ಮುನಿಸಿ ಪಾಲಿಟಿಯವರ ಮೇಲ್ವಿಚಾರಣೆಯಲ್ಲಿ ನಡೆಯಬೇಕು. ಜನಾ ರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯು ಒಪ್ಪಿದ ಮಾದರಿ ಪ್ರಾಣಿವಧೆ ಮಾಡುವ ಸ್ಥಳಗಳನ್ನು ಪ್ರತಿಯೊಂದು ಮುನಿಸಿ ಪಾಲಿಟಿಯವರೂ ಕಟ್ಟಬೇಕು. ಅಂತಹ ಸ್ಥಳಗಳಲ್ಲಿ ಕಾಯಿಲೆ ಪ್ರಾಣಿಗಳನ್ನು ಬೇರ್ಪಡಿಸುವ ಆವರಣವಿರಬೇಕು. ಪ್ರಾಣಿವಧೆ ಮಾಡುವ ಸ್ಥಳವು ಊರ ಹೊರಗೆ ಅಥವಾ ಒಂಟಿಯಾದ ಶುಚಿ ಯಾದ ಸ್ಥಳದಲ್ಲಿರಬೇಕು. ಅಲ್ಲಿಗೆ ಒಳ್ಳೆಯ ನೀರಿನ ಸರಬರಾಜು ಇರಬೇಕು. ನೆಲ ಮತ್ತು ಮೋರಿಗಳು ಸೀಮೆಂಟ್ ಮಾಡಿರ ಬೇಕು. ವಧಾ ಗೃಹದಲ್ಲಿ ಗಾಳಿ ಬೆಳಕುಗಳು ಯಥೇಚ್ಛವಾಗಿ ಬರುವಂತಿರಬೇಕು. ಪ್ರಾಣಿಗಳನ್ನು ಬೇರ್ಪಡಿಸಿ ಒಂದಾದ ಮೇಲೊಂದರಂತೆ ಕೊಲ್ಲುವ ಅನುಕೂಲವಿರಬೇಕು. ರಕ್ತ ಮತ್ತು ಇತರೇ ವಿಸರ್ಜನೆ ಮಾಡಬೇಕಾದ ವಸ್ತುಗಳಿಗೆ ಸರಿಯಾದ ಸ್ಥಳವಿರಬೇಕು. ಅನಂತರ ಮಾಂಸವನ್ನು ಮುಚ್ಚಿದ ಗಾಡಿ ಗಳಲ್ಲಿ ಸಾಗಿಸುವ ವ್ಯವಸ್ಥೆ ಇರಬೇಕು. ಈ ಸ್ಥಳದಲ್ಲಿ ನೊಣಗಳು

ಸೇರಲು ಅವಕಾಶವಿರಬಾರದು. ವಧೆ ಮಾಡುವ ಕಟುಕರಿಗೆ, ಉಗಿಯುವ ಪೀಕ್‌ದಾನಿ, ಕಕ್ಕಸು, ಮೂತ್ರಿ ಮತ್ತು ಕೈಕಾಲು ತೊಳೆಯುವ ವ್ಯವಸ್ಥೆಯು ವಧೆಮಾಡುವ ಸ್ಥಳದಿಂದ ಬೇರೆ ಕಡೆ ಇರುವಂತೆ ಏರ್ಪಡಿಸಬೇಕು.

## ಹೋಟೆಲು, ಕ್ಯಾಂಟೀನು ಮತ್ತು ಇತರೇ ಆಹಾರ ತಯಾರಿಸುವ ಸ್ಥಳಗಳು

ಪ್ರಾಣಿವಧೆ ಮತ್ತು ಮಾಂಸ ತಯಾರಿಸುವ ಸ್ಥಳಗಳನ್ನು ಬಿಟ್ಟು ಮಿಕ್ಕ ಇತರೇ ಕೈಗಾರಿಕೆಗಳಿಂದ ಆಹಾರ ತಯಾರಿಸುವುದನ್ನು ಖಾಸಗೀ ಜನರಿಂದ ನಡೆಸಲು ಅವಕಾಶ ಕೊಡಬಹುದು. ಆದರೆ ಆ ಕೈಗಾರಿಕೆ ನಡೆಯುವ ಸ್ಥಳಗಳನ್ನು ಶುಚಿಯಾಗಿರಿಸಬೇಕು. ಮತ್ತು ನೊಣಗಳು ವೃದ್ಧಿಯಾಗಲು ಅವಕಾಶವಿರಬಾರದು. ಈ ಕೈಗಾರಿಕೆ ನಡೆಯುವ ಕಟ್ಟಡಗಳು ಶುಚಿಯಾಗಿಯೂ, ಧಾರಾಳವಾಗಿ ಗಾಳಿ ಬೆಳಕು ಬರುವಂತೆಯೂ, ನೆಲವು ಗಟ್ಟಿಯಾಗಿಯೂ, ನುಣುಪಾಗಿಯೂ ಮತ್ತು ತೊಳೆಯುವುದಕ್ಕೆ ಅವಕಾಶವಿರುವಂತೆಯೂ ಇರಬೇಕು. ಊಟದ ಮನೆಯಲ್ಲಿ ಟೇಬಲ್ ಮೇಲೆ ಊಟ ಮಾಡುವ ಪ್ರತಿಯೊಬ್ಬನಿಗೆ ೧೦ರಿಂದ ೧೫ ಚ. ಅ. (೧ರಿಂದ ೧ $^1/_2$ ಚ. ಮೀ) ಗಳಷ್ಟು ಸ್ಥಳಕ್ಕೆ ಅವಕಾಶ ಮಾಡಿಕೊಡಬೇಕು. ಆದರೆ ಕ್ಯಾಂಟೀನುಗಳಲ್ಲಿ ಈ ಸ್ಥಳವು ೫ರಿಂದ ೭ ಚ. ಅ. (೦. ೫-೦. ೭೫ ಚ.ಮೀ) ಗಳಿದ್ದರೆ ಸಾಕು. ಉಪಯೋಗಿಸುವ ಪಾತ್ರೆಗಳಿಂದ ಆಹಾರ ಪದಾರ್ಥಗಳಿಂದ ಯಾವ ವಿಧವಾದ ಕೆಡಕೂ ಆಗಬಾರದು. ಅಲ್ಲದೆ ಅವು ಸುಲಭವಾಗಿ ತೊಳೆಯುವುದಕ್ಕೆ ಮತ್ತು ಬಿಸಿನೀರಿ

ನಿಂದ ಶುದ್ಧೀಕರಣಗೊಳಿಸುವುದಕ್ಕೆ ಸಾಧ್ಯವಾಗುವಂತೆ ಇರಬೇಕು. ಸಾಧ್ಯವಾದ ಮಟ್ಟಿಗೆ ತಿಂಡಿ ಮತ್ತು ಪಾನೀಯಗಳನ್ನು ಮಾಡುವುದಕ್ಕೆ ಮುಚ್ಚಲು ಸಾಧ್ಯವಿರುವ ಯಂತ್ರಗಳನ್ನೂ ಮತ್ತು ವಿದ್ಯುಚ್ಛಕ್ತಿಯನ್ನೂ ಉಪಯೋಗಿಸಬೇಕು. ಇದರಿಂದ ಅಶುಚಿಯಾದ ಕೈಯಿಂದ ಮುಟ್ಟುವುದು, ನೊಣ, ಧೂಳು ಮೊದಲಾದುವು ಸೇರುವುದು ಮತ್ತು ಹೊಗೆ ಸೇರುವುದಕ್ಕೆ ಅವಕಾಶವು ಕಡಿಮೆಯಾಗುತ್ತದೆ. ತಿಂಡಿ, ಪಾನೀಯಗಳನ್ನು ತುಂಬುವ ಪಾತ್ರೆಗಳು, ಕಾಗದಗಳು ಮೊದಲಾದುವನ್ನು ಮೊದಲೇ ಶುದ್ಧೀಕರಣಗೊಳಿಸಿರಬೇಕು. ತಿಂಡಿ ಪದಾರ್ಥಗಳನ್ನು ಮಾಡುವ ಸ್ಥಳದಿಂದ ದೂರದಲ್ಲಿ ಕಕ್ಕಸು, ಬಚ್ಚಲು ಮತ್ತು ಕೈಕಾಲು ತೊಳೆಯುವ ನೀರಿನ ಸೌಕರ್ಯವನ್ನು ಒದಗಿಸಬೇಕು. ಉಗಿಯಲು ಬೇಕಾಗುವ ಪೀಕದಾನಿಗಳನ್ನು ಕೆಲಸ ನಡೆಯುವ ಸ್ಥಳದಲ್ಲಿ ಇಡಬಹುದು. ಕೆಲಸ ನಡೆಯುವ ಸ್ಥಳದಲ್ಲಿ ವಾಸಿಸಲು ಅವಕಾಶ ಕೊಡಬಾರದು.

ತಿಂಡಿ ಪದಾರ್ಥಗಳು, ಸೋಡ, ಐಸ್ ಮೊದಲಾದುವುಗಳನ್ನು ತಯಾರಿಸುವ ನೀರು ಕುಡಿಯುವ ನೀರಿನ ಸಮಾನ ಲಕ್ಷಣಗಳನ್ನುಳ್ಳದ್ದಾಗಿರಬೇಕು. ಮೇಲ್ಕಂಡ ತಿಂಡಿ ಪದಾರ್ಥಗಳನ್ನು ಮತ್ತು ಪಾನೀಯಗಳನ್ನು ತಯಾರಿಸುವ ಕಟ್ಟಡಗಳು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆ ಮತ್ತು ಅಭಿಪ್ರಾಯದಂತೆ ಕಟ್ಟಬೇಕು. ಆತನು ಅವುಗಳ ನಕ್ಷೆ ಮೊದಲಾದುವುಗಳನ್ನು ತಯಾರಿಸಲು ತನ್ನ ಸಲಹೆಗಳನ್ನು ಜನಾರೋಗ್ಯದ ಕಡೆ ಗಮನವಿಟ್ಟು ಕೊಡುವನು.

## ಹಾಲಿನ ಡೈರಿಗಳು

ಇವುಗಳು ಹಳ್ಳಿಗಳಲ್ಲಿ ಇರಬಹುದು, ಆದರೆ ಇವುಗಳು ತಯಾರಿಸಿದವಸ್ತುಗಳು ಪೇಟೆಗಳಲ್ಲಿ ಮಾರಲ್ಪಡುತ್ತವೆ. ಆದುದರಿಂದ ದನದ ಕೊಟ್ಟಗೆ ಮೊದಲಾದುವು ಶುಚಿಯಾಗಿ ಗಾಳಿ ಬೆಳಕುಗಳು ಬರುವಂತೆಯೂ, ನೆಲವು ಶುದ್ಧವಾಗಿ ಸೀಮೆಂಟ್ ಅಥವಾ ಹಾಸುಗಲ್ಲುಗಳಿಂದ ಕೂಡಿ, ವಾಟವಾಗಿಯೂ, ಮೋರಿಗಳಿಂದಲೂ, ಮತ್ತು ತೊಳೆಯುವುದಕ್ಕೆ ಅನುಕೂಲವಾಗಿಯೂ ಇರುಬೇಕು. ಹಸುಗಳು ನಿಲ್ಲುವುದಕ್ಕೂ ಅವುಗಳ ಆಹಾರವನ್ನಿಡವುದಕ್ಕೂ ನೀರು ಕುಡಿಯುವುದಕ್ಕೂ ಅನುಕೂಲವಾಗಿರುವಂತೆ ತಕ್ಕಷ್ಟು ವಿಸ್ತೀರ್ಣವುಳ್ಳ ಕೊಟ್ಟಗೆಯು ಇರತಕ್ಕದ್ದು. ಒಂದು ಹಸುವಿಗೆ ಸುಮಾರು ೮೦ ಚ. ಅ. ಗಳಷ್ಟು ( ೮ ಚ. ಮೀ ) ವಿಸ್ತಾರವಾದ ಸ್ಥಳ ಬೇಕು. ಒಂದು ಕರುವಿಗೆ ಹಸುವಿನ ಮುಕ್ಕಾಲು ಭಾಗ ಅಂದರೆ ೬೦ ಚ.ಅ. ಗಳಷ್ಟು ( ೬ ಚ. ಮೀ ) ವಿಸ್ತಾರವಾದ ಸ್ಥಳ ಬೇಕು. ಕರುಗಳು ನಿಲ್ಲುವ ಸ್ಥಳಗಳು ಮತ್ತು ಹಾಲು ಕರೆಯುವ ಸ್ಥಳಗಳು ಬೇರೆ ಬೇರೆ ಇರಬೇಕು. ಹಾಲು ಕರೆಯುವ ಸ್ಥಳದಲ್ಲಿ ನೊಣಗಳು ಸೇರಲು ಅವಕಾಶವಿರಬಾರದು. ಹಾಲನ್ನು ಶುದ್ಧವಾದ ಪಾತ್ರೆಗಳಲ್ಲಿ ತೊಳೆದು ಅದನ್ನು “ಕ್ರಿಮಿ ರಹಿತ” ವನ್ನಾಗಿ ಮಾಡುವ ಯಂತ್ರದಲ್ಲಿ ಇಟ್ಟು ಅನಂತರ ಶೀಸೆಗಳಲ್ಲಿ ಹಾಕಿ ಸೀಲ್ ಮಾಡಬೇಕು. ಹಾಲನ್ನು ೧೬೭° F ( ೭೫°C ) ಶಾಖದಲ್ಲಿ ಸುಮಾರು ೧೫ ಸೆಕೆಂಡುಗಳು ಇಡುವುದರಿಂದ ಕ್ರಿಮಿಗಳು ಸಾಯುತ್ತವೆ. ತಕ್ಷಣ ಉಷ್ಣಾಂಶವನ್ನು ೫೦F°(೫°c) ಗೆ ಇಳಿಸಿ ಶೀಸೆಗಳಲ್ಲಿ ತುಂಬುತ್ತಾರೆ.

ದನದ ಕೊಟ್ಟಿಗೆಯಲ್ಲಿ ಸಿಗುವ ಗೊಬ್ಬರವನ್ನು ಶುಚಿಯಾಗಿ ನೊಣಗಳು ಸೇರದ ಹಾಗೆ ವಿಸರ್ಜಿಸಬೇಕು. ಅಲ್ಲಿ ಕೆಲಸ ಮಾಡುವ ಜನರಿಗೆ ಕಕ್ಕಸು, ಮೂತ್ರಿ ಮತ್ತು ನೀರಿನ ಕೊಳಾಯಿ ಗಳನ್ನು ಹಾಲು ಕರೆಯುವ ಕೊಠಡಿಯಿಂದ ದೂರವಾಗಿ ಏರ್ಪಡಿಸ ಬೇಕು. ಮುನಿಸಿಪಾಲಟಿಗಳವರು ಮೇಲ್ಕಂಡ ಶುಚಿಯಾದ ಮಾದರಿಯಲ್ಲಿ ಗೋಶಾಲೆಗಳನ್ನು ನಿರ್ಮಾಣ ಮಾಡಿ ಹಸು ಮತ್ತು ಎಮ್ಮೆಗಳ ಮಾಲೀಕರು ಅವುಗಳನ್ನು ಬಾಡಿಗೆಗೆ ತೆಗೆದು ಕೊಳ್ಳುವುದಕ್ಕೆ ಒತ್ತಾಯ ಮಾಡಬೇಕು. ಸಹಕಾರ ಡೈರಿ ಫಾರಂಗಳಿಗೆ ಸರಕಾರದವರು ಪ್ರೋತ್ಸಾಹ ನೀಡಬೇಕು. ಡೈರಿ ಫಾರಂಗಳನ್ನು ಕಟ್ಟುವಿಕೆಯ ರೀತಿನೀತಿಗಳನ್ನು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆ ಮತ್ತು ಅಭಿಪ್ರಾಯ ಗಳಂತೆ ನಡೆಯಬೇಕು.

**ಆಹಾರ ಪದಾರ್ಥಗಳನ್ನು ಶೇಖರಿಸಿ ಇಡುವ ಸ್ಥಳಗಳು**

ಇವುಗಳು ಯಾವುವೆಂದರೆ ಸರ್ಕಾರಿ ಮತ್ತು ಖಾಸಗೀ ಗೋಡೌನ್‌ಗಳು, ಅಂಗಡಿಗಳು, ಗೂಡ್ಸ್ ಷೆಡ್ಡುಗಳು ಮೊದಲಾ ದುವು. ಇವುಗಳಲ್ಲಿ ಇಲಿಗಳಿಂದ ತಿಂದು ನಾಶವಾಗುವ ಧಾನ್ಯವು ನಮ್ಮ ದೇಶದಲ್ಲಿ ಬಹಳ ಹೆಚ್ಚು. ಅಲ್ಲದೆ ಇವುಗಳ ಅಕ್ಕಪಕ್ಕದಲ್ಲಿ ವಾಸದ ಮನೆಗಳಿದ್ದರೆ ಅವುಗಳಲ್ಲಿ ವಾಸಿಸುವ ಜನರಿಗೆ ಪ್ಲೇಗು ಮೊದಲಾದ ಸಾಂಕ್ರಾಮಿಕ ಕಾಯಿಲೆಗಳು ಬರುವ ಸಂಭವವಿದೆ. ಅದುದರಿಂದ ಗೋಡೌನ್‌ಗಳೆ ಮೊದಲಾದುವನ್ನು ನಿರ್ಮಾಣ ಮಾಡುವುದಕ್ಕೆ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆಗಳನ್ನು ತೆಗೆದುಕೊಂಡು ಅವುಗಳ ನಕ್ಷೆ ಮತ್ತು ಕಟ್ಟುವ ವಿಧಾನಗಳನ್ನು ಅನುಸರಿಸಬೇಕು. ಹಾಗೆ ಮಾಡಿದಲ್ಲಿ ಅಂತಹ

ಕಟ್ಟಡಗಳಲ್ಲಿ ತೇವ ಮತ್ತು ಇಲಿಗಳು ಸೇರದಂತೆಯೂ ಮತ್ತು ಆಗಾಗ ಇಲಿಗಳ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆಯೂ ಆತನು ನಕ್ಷೆಯನ್ನು ತಯಾರಿಸಬಲ್ಲನು. ಈ ಗೋಡೌನ್‌ಗಳಲ್ಲಿ ಗಾಳಿ ಬೆಳಕುಗಳು ಸಾಕಷ್ಟು ಇದ್ದು ಧಾನ್ಯಗಳು ಕೆಡದಂತೆಯೂ ಅಲ್ಲಿ ಕೆಲಸ ಮಾಡುವ ಜನರಿಗೆ ಅಪಾಯವಾಗದಂತೆಯೂ ಇರಬೇಕು.

ಸಾಧಾರಣವಾಗಿ ಗೋಡೌನ್‌ಗಳಲ್ಲಿ ಕಿಟಕಿ ಬಾಗಿಲುಗಳು ಹೊರಗೆ ತೆಗೆಯುವಂತಿರಬೇಕು. ಸುಮಾರು ೩ ಅಡಿ ಎತ್ತರ (೧ ಮೀ) ವಿರುವ ಮೋಟು ಗೋಡೆಯನ್ನು ಪ್ರತಿ ಬಾಗಿಲು ಕಿಟಕಿಗಳ ಹೊರಗೆ ಕಟ್ಟಬೇಕು. ಆ ಗೋಡೆಯ ಮೇಲ್‌ಭಾಗದಲ್ಲಿ ಸೀಮೆಂಟ್ ಕಾಂಕ್ರೀಟಿನಿಂದ ಮಾಡಿದ ಚಪ್ಪಡಿಯನ್ನು ಗೋಡೆಯ ಎರಡು ಕಡೆಗೂ ಕೊನೆಯ ಪಕ್ಷ ೯ ಅಂಗುಲವಾದರೂ (೨೦ ಸೆಂ.ಮೀ) ಚಾಚಿರುವಂತಿರಬೇಕು. ಗೋಡೌನ್‌ಗಳ ನೆಲವು ಸೀಮೆಂಟ್ ಕಾಂಕ್ರೀಟ್ ಅಥವಾ ಕಲ್ಲು ಚಪ್ಪಡಿಗಳನ್ನು ಹಾಸಿದ್ದಾಗಿರಬೇಕು. ಮಳೆನೀರಿನ ಪೈಪುಗಳನ್ನು ಗೋಡೌನುಗಳಲ್ಲಿಡಬಾರದು. ಗೋಡೌನುಗಳ ಚಾವಣಿಯು ಇಲಿಗಳು ಸಾಯಲು ಹಾಕುವ ಇಲಿನಾಶಿನಿ ಹೊಗೆಯನ್ನು ಹೊರಗೆ ಬಿಡದಂತಿರಬೇಕು. ಗೋಡೌನುಗಳ ಅಕ್ಕಪಕ್ಕದಲ್ಲಿ ಎಲ್ಲಿಯೂ ಕಸಕಡ್ಡಿಗಳ ರಾಶಿ ಇರಬಾರದು.

## ಚಿಲ್ಲರೆಯಾಗಿ ಆಹಾರ ಪದಾರ್ಥಗಳನ್ನು ಮಾರುವ ಸ್ಥಳಗಳು

ಇವುಗಳು ಯಾವುವೆಂದರೆ ಮಾರುಕಟ್ಟೆಗಳು, ಹೊಟೇಲುಗಳು ಕ್ಷೀರಕ್ಷೇತ್ರಗಳು, ಕ್ಯಾಂಟೀನ್‌ಗಳು ಮೊದಲಾದುವು. ಮುನಿಸಿ,

ಪಾಲಿಟಿಗಳವರು ಪ್ರತಿ ಊರಿನಲ್ಲಿಯೂ ಮಾದರಿ ಮಾರುಕಟ್ಟೆಗಳನ್ನು ಕಟ್ಟಬೇಕು. ಅವುಗಳಲ್ಲಿ ಕುಡಿಯುವುದಕ್ಕೆ, ಪದಾರ್ಥಗಳನ್ನು ತೊಳೆಯುವುದಕ್ಕೆ ಮತ್ತು ಇತರೇ ಶುಚಿತ್ವದ ಕೆಲಸಗಳಿಗೆ ಶುದ್ಧವಾದ ನೀರಿನ ಸರಬರಾಯಿ ಇರಬೇಕು. ಕಾಲುಹಾದಿಗಳಿಗೆ ಹಾಸುಗಲ್ಲುಗಳು ಹಾಕಿರಬೇಕು; ಮೋರಿಗಳಲ್ಲಿ ನೀರು ನಿಲ್ಲದೆ ಹರಿಯುವಂತಿರಬೇಕು; ಪದಾರ್ಥಗಳನ್ನು ಮಾರುವುದಕ್ಕೆ ಅಂಗಡಿಗಳಿರಬೇಕು; ಅಲ್ಲಿರಬಹುದಾದ ಮತ್ತು ಬಂದು ಹೋಗುವ ಜನರಿಗೆ ಮೂತ್ರ ಕಕ್ಕಸುಗಳು ಇರಬೇಕು. ಅಲ್ಲಿ ಆಗಿಂದಾಗ್ಗೆ ಬೀಳುವ ಕಚಡವನ್ನು ತೆಗೆದು ಸಾಗಿಸುವ ಏರ್ಪಾಟು ಇರಬೇಕು. ನೊಣಗಳು ಕೂಡಬಹುದಾದ ಪದಾರ್ಥಗಳನ್ನು ಕನ್ನಡಿ ಅಥವಾ ಜಾಲರಿ ಇರುವ ಪೆಟ್ಟಿಗೆಗಳಲ್ಲಿ ಇಟ್ಟು ಪ್ರದರ್ಶನಮಾಡುವ ಏರ್ಪಾಟು ಮಾಡಬೇಕು. ಇಂತಹ ಮಾದರಿ ಮಾರುಕಟ್ಟೆಗಳನ್ನು ನಿರ್ಮಿಸಬೇಕಾದರೆ ಜನಾರೋಗ್ಯ ಇಂಜಿನೀಯರ್ ಅಥವಾ ಶಿಲ್ಪಿಯ ಸಲಹೆಗಳನ್ನು ತೆಗೆದುಕೊಳ್ಳಬೇಕು.

ಹೋಟಿಲುಗಳು, ಕ್ಯಾಂಟೀನುಗಳು, ಮೊದಲಾದುವನ್ನು ಅವುಗಳ ಉಪಯೋಗಕ್ಕೆ ತಕ್ಕುದಾಗಿ ನಿರ್ಮಿಸಬೇಕು. ಅವುಗಳಲ್ಲಿ ಇರುವ ಅಡಿಗೆ ಮನೆಗಳು ಅಚ್ಚುಕಟ್ಟಾಗಿ, ಸರಿಯಾದ ಗಾಳಿ ಬೆಳಕುಗಳು ಬರುವುದಕ್ಕೆ ಅವಕಾಶವಿರಬೇಕು. ಪಾತ್ರೆ, ಪದಾರ್ಥಗಳನ್ನು ತೊಳೆಯಲು ಬಚ್ಚಲು ಇರಬೇಕು. ಪಾತ್ರೆ, ತಟ್ಟೆ, ಮೊದಲಾದುವನ್ನು ಕುದಿಯುವ ಬಿಸಿನೀರಿನಲ್ಲಿ ಅದ್ದಿ ತೊಳೆಯುವ ಸೌಕರ್ಯವಿರಬೇಕು. ಬೇಡವಾದ ಕಾಯಿ ಕಸುರುಗಳನ್ನು ಹಾಕಲು ಮುಚ್ಚಳವಿರುವ ತೊಟ್ಟಿ ಇರಬೇಕು. ಶುದ್ಧವಾದ ನೀರಿನ ನಲ್ಲಿಯೂ ಇರಬೇಕು. ಅಲ್ಲಿ ಕೆಲಸಮಾಡುವವರಿಗೆ ಮತ್ತು

ಗಿರಾಕಿಗಳಿಗೆ ಬೇರೆ ಬೇರೆ ಕಕ್ಕಸು ಮತ್ತು ಮೂತ್ರಿಗಳಿರಬೇಕು. ಇವು ಅಡಿಗೆ ಮನೆ ಮತ್ತು ಊಟದ ಮನೆಯಿಂದ ದೂರವಾಗಿರಬೇಕು. ಇಂತಹ ಕಟ್ಟಡಗಳನ್ನು ಕಟ್ಟಲು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಮೂಲಕ ಸಲಹೆಗಳನ್ನು ತೆಗೆದುಕೊಳ್ಳಬೇಕು.

## ೭. ಗಾಳಿ ಮತ್ತು ಬೆಳಕು

ಗಾಳಿ, ಬೆಳಕು ಕಡಿಮೆಯಾಗಿರುವುದರಿಂದ, ' ನೇರವಾದ ಯಾವ ಕಾಯಿಲೆಯೂ ಬರದಿದ್ದರೂ, ಅಂಟುರೋಗಗಳು ಒಬ್ಬರಿಂದೊಬ್ಬರಿಗೆ ವ್ಯಾಪಿಸಲು ಸಹಕಾರಿಯಾಗುತ್ತದೆ. ಮನುಷ್ಯನ ತೃಪ್ತಿ ಸಂತೋಷಗಳು, ಗಾಳಿ ಬೆಳಕುಗಳಿಂದ ಅವನ ದೇಹದ ಮೇಲೆ ಉಂಟಾಗುವ ಒಳ್ಳೆಯ ಪರಿಣಾಮಗಳ ಮೇಲೆ ಅವಲಬಿಂಸಿರುತ್ತದೆ. ಕಟ್ಟಡಗಳ ನಕ್ಷೆ ತಯಾರಿಸುವ ಶಿಲ್ಪಿಗೂ ಮತ್ತು ನಗರಗಳ ಯೋಜನಾಗಾರನಿಗೂ ಈ ವಿಷಯ ಚೆನ್ನಾಗಿ ತಿಳಿದಿದೆ. ಈ ಸೌಕರ್ಯವನ್ನು ಒದಗಿಸುವುದಕ್ಕೋಸ್ಕರ ಉದ್ಯಾನವನಗಳು, ಅಗಲವಾದ ರಸ್ತೆಗಳು, ಖಾಲಿಸ್ಥಳಗಳು, ಸೈಟಿನಲ್ಲಿ ಮನೆಯು ಆವರಿಸುವ ಸ್ಥಳ, ಕಿಟಕಿ ಬಾಗಿಲುಗಳು ಹೊರಗೆ ಮತ್ತು ಒಳಗೆ ಬಳಿಯುವ ಬಣ್ಣಗಳು ಮೊದಲಾದುವುಗಳ ಯೋಜನೆಯು ಅವಲಂಬಿಸಿರುತ್ತದೆ.

ಒಳ್ಳೆಯ ಗಾಳಿ ಬೆಳಕು, ಮನೆಯಲ್ಲಾಗಲೀ ಪಾಠಶಾಲೆಯಲ್ಲಾಗಲೀ, ಆಫೀಸುಗಳಲ್ಲಾಗಲೀ ಅಥವಾ ಕಾರ್ಖಾನೆಗಳಲ್ಲಾಗಲೀ ಉತ್ಸಾಹವಾಗಿ ಕೆಲಸ ಮಾಡಲು ಪ್ರೇರೇಪಿಸುತ್ತದೆ. ಮತ್ತು ಇದರಿಂದ ಆಕಸ್ಮಿಕ ಅಪಾಯಗಳು ಕಡಿಮೆಯಾಗುತ್ತವೆ; ಈ ವಿಷಯವಾಗಿ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿ ತಕ್ಕ ಸಲಹೆ ಕೊಡಬಲ್ಲನು.

### ಮನೆಗಳನ್ನು ಕಟ್ಟುವಾಗ ಕಿಟಕಿಗಳ ವಿಷಯದಲ್ಲಿ ಅನುಸರಿಸಬೇಕಾದ ಕೆಲವು ಸಲಹೆಗಳು

(೧) ಪ್ರತಿ ಮನೆಯ ಬಾಗಿಲು ಮತ್ತು ಕಿಟಕಿಗಳ ವಿಸ್ತೀರ್ಣ

ನೆಲದ ವಿಸ್ತೀರ್ಣದ ೧/೬ರಿಂದ ೧/೭ರ ವರೆಗಿರಬೇಕು.

(೨) ಬಾಗಿಲು ಮತ್ತು ಕಿಟಕಿಗಳ ಕಟ್ಟುಗಳು ಸುಮಾರು ಶೇಕಡಾ ೧೫ರಿಂದ ೫೦ರ ವರೆಗೆ ಆಕಾಶದಿಂದ ಬರುವ ಹಗಲಿನ ಬೆಳಕನ್ನು ತಡೆಯುತ್ತದೆ.

(೩) ಜನರು ವಾಸಿಸುವ ರೂಮುಗಳಲ್ಲಿ ಕೊನೆಯ ಪಕ್ಷ ಎರಡು ಕಿಟಕಿಗಳಾದರೂ ಎದುರು ಬದುರಾಗಿ ಇದ್ದು, ಗಾಳಿಯು ತಡೆಯಿಲ್ಲದೆ ಓಡಾಡುವಂತಿರಬೇಕು.

(೪) ಕಿಟಕಿಗಳ ಕೆಳಭಾಗವು ನೆಲದ ಮಟ್ಟಕ್ಕಿಂತ ೩ ಅಡಿಗಿಂತ (೧ ಮೀ) ಮೇಲಿರಬಾರದು. ಕಿಟಕಿಗಳ ಮೇಲುಭಾಗವು ನೆಲ ಮಟ್ಟದಿಂದ ನಾಲ್ಕೂವರೆ ಅಡಿಗಳಿಗಿಂತ ($1^1/_2$ಮೀ) ಕೆಳಗಿರಬಾರದು. ಸಾಧಾರಣವಾಗಿ ೬ ಅಡಿಗಳ (೨ ಮೀ) ಎತ್ತರವಾದರೂ ಇರಬೇಕು.

(೫) ಕಿಟಕಿಯ ಕದಗಳು ಹೊರಭಾಗಕ್ಕೆ ಖಾಲಿ ಸ್ಥಳದ ಕಡೆಗೆ ಮಡಚುವಂತೆ ಇರಬೇಕು, ಅಥವಾ ಕಿಟಕಿಯ ಹೊರಭಾಗವು ೧೨ ಅಡಿಗಳಿಗಿಂತ (೪ ಮೀ) ಹೆಚ್ಚಿಲ್ಲದ ವೆರಾಂಡದ ಕಡೆಗಿರಬೇಕು.

(೬) ಕಿಟಕಿಗಳ ವಿಸ್ತೀರ್ಣವು ನೆಲದ ವಿಸ್ತೀರ್ಣದ ೧/೧೦ ಭಾಗವಾದರೂ ಜನರು ವಾಸಮಾಡುವ ಕೊಠಡಿಗಳಲ್ಲಿ ಇರಬೇಕು; ೧/೫ ಭಾಗವಾದರೂ ಅಡಿಗೆ ಮನೆ, ಆಫೀಸುಗಳು, ಮತ್ತು ಪಾಠಶಾಲೆಗಳಲ್ಲಿ ಇರಬೇಕು; ೧/೪ ಭಾಗವಾದರೂ ಲ್ಯಾಬೋರೇಟರಿಗಳಲ್ಲೂ, ಡ್ರಾಯಿಂಗ್ ಕೆಲಸ ಮಾಡುವ ರೂಮುಗಳಲ್ಲಿಯೂ ಇರಬೇಕು. ತಿರುಗಾಡುವ ದಾರಿಗಳಲ್ಲಿ, ಮೆಟ್ಟಲುಗಳು ಅಥವಾ ಹಂತ ಇರುವಲ್ಲಿ, ಸ್ನಾನ ಗೃಹಗಳಲ್ಲಿ ಕೂಡ

ಬೇಕಾದ ಗಾಳಿ ಬೆಳಕುಗಳ ಪ್ರಮಾಣವು ಅಲ್ಲಿನ ನೆಲದ ವಿಸ್ತಾರದ ೧/೧೦ ಭಾಗಕ್ಕಿಂತ ಕಡಿಮೆ ಇರಬಾರದು.

(೭) ಮನೆಯ ಒಳಗಡೆ ಇರುವ ಗೋಡೆಗಳ ಬಣ್ಣವು, ಹಸುರು ಕೆಂಪು ಮೊದಲಾದ ಬಣ್ಣಗಳಿಂದ ಕೂಡಿದ್ದು ಬೆಳಕನ್ನು ಹೀರಿ ಕೊಳ್ಳುವುದಾಗಿದ್ದರೆ, ಅಂತಹ ಕಡೆ ಗಾಳಿ ಬೆಳಕುಗಳಿಗಾಗಿ ಕೊಡುವ ಕಿಟಕಿಯ ಸಾಧಾರಣ ವಿಸ್ತಾರಕ್ಕಿಂತ ಶೇಕಡಾ ೨೫ ಭಾಗ ಹೆಚ್ಚಾಗಿರಬೇಕು.

(೮) ಪ್ರತಿ ಮನೆಗೆ ಕೊಡಬೇಕಾದ ವೆಂಟಿಲೇಟರುಗಳ ವಿಸ್ತಾರವು ಅಂಥ ಮನೆಯ ನೆಲದ ವಿಸ್ತಾರಕ್ಕಿಂತ ಶೇಕಡಾ ೨ ಭಾಗಗಳಿಗಿಂತ ಕಡಿಮೆ ಇರಬಾರದು. ಇವು ಗಾಳಿಯ ಚಲನೆಗೆ ಸಹಾಯ ಮಾಡುತ್ತವೆ.

(೯) ಯಾವ ಕಡೆಗೆ ಬಾಗಿಲು ಕಿಟಕಿ ಅಥವಾ ವೆಂಟಿಲೇಟರು ಇಟ್ಟಿಲ್ಲವೋ ಅಂತಹ ಕಡೆಗೆ ಖಾಲಿಯಾಗಿ ಸ್ಥಳವನ್ನು ಬಿಟ್ಟಿರಬಾರದು.

ಈ ಮೇಲ್ಕಂಡ ಸೂತ್ರಗಳನ್ನು ಪಾಲಿಸಿ ಕಟ್ಟಡಗಳ ನಕ್ಷೆಯನ್ನು ತಯಾರಿಸಬೇಕಾದರೆ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಗೆ ಸುಲಭಸಾಧ್ಯ. ಆದುದರಿಂದ ಅಂತಹವರ ಸೇವೆಯನ್ನು ಸೂಕ್ತವಾಗಿ ಉಪಯೋಗಿಸಿಕೊಳ್ಳಬೇಕಾದುದು ಸಹಜ.

## ಹೊಗೆ ಮತ್ತು ಧೂಳಿನ ಹತೋಟಿ

ಹೊಗೆ ಮತ್ತು ಧೂಳನ್ನು ಸಹಿಸಿಕೊಳ್ಳುವುದಕ್ಕೆ ಆಗುವುದಿಲ್ಲ. ಇವು ಬೆಳಕನ್ನು ಕಡಿಮೆಮಾಡುವುದಲ್ಲದೆ ವಾತಾವರಣವನ್ನು ಕೆಡಿಸುತ್ತವೆ. ಕೆಲವು ರೀತಿಯ ಧೂಳನ್ನು ಕುಡಿಯುವುದು ಅನಾರೋಗ್ಯವನ್ನು ಉಂಟುಮಾಡುತ್ತದೆ.

ಮನೆಗಳಲ್ಲಿ ಒಲೆಗಳಿಂದ ಬರುವ ಹೊಗೆಯು ಮನೆಯೊಳಗೆ ಬರದಂತೆ ಚಿಮಣಿಗಳನ್ನು ಕಟ್ಟಬೇಕು. ಚಿಮಣಿಗಳು ಒಲೆಯಿಂದ ಬಹಳ ಎತ್ತರದಲ್ಲಿ ಇರಬಾರದು. ಹಾಗೇನಾದರೂ ಇಡಬೇಕಾದಲ್ಲಿ ಅವುಗಳಿಗೆ ಅನ್ವಯಿಸುವ 'ಹುಡ್' ಗಳನ್ನು ಕಟ್ಟಿ ಹೊಗೆಯು ಚಿಮಣಿಯ ಮೂಲಕ ಹೋಗುವಂತೆ ಮಾಡಬೇಕು. ಹೊಗೆಯು ಚಿಮಣಿಯೊಳಗೆ ಹೋಗುವ ದಾರಿಯು ಸರಾಗವಾಗಿರಬೇಕು. ಬಾಗಿಲು ಕಿಟಕಿಗಳು ಅಡಿಗೆ ಮನೆಯ ಸರಿಯಾದ ಸ್ಥಳದಲ್ಲಿ ಇರಬೇಕು, ಇಲ್ಲವಾದಲ್ಲಿ ಗಾಳಿಯು ಇವುಗಳ ಮೂಲಕ ನುಗ್ಗಿ ಹೊಗೆಯು ಮನೆಯೊಳಗೆ ಆವರಿಸುವಂತಾಗುತ್ತದೆ. ಆದುದರಿಂದ ಗಾಳಿಯು ವರ್ಷದ ವಿವಿಧ ಕಾಲಗಳಲ್ಲಿ ಯಾವ ಕಡೆಗೆ ಬಿರುಸಾಗಿ ಬೀಸುತ್ತದೆಂಬುದನ್ನು ತಿಳಿದು ಕಿಟಕಿ ಬಾಗಿಲುಗಳನ್ನು ಅಡಿಗೆ ಮನೆಯಲ್ಲಿ ಅಳವಡಿಸಬೇಕು. ಈ ರೀತಿ ಮಾಡಬೇಕಾದರೆ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆ ತೆಗೆದುಕೊಳ್ಳಬೇಕು.

ಹೊಗೆ ಮತ್ತು ಧೂಳು ಫ್ಯಾಕ್ಟರಿಗಳಲ್ಲಿ, ರೈಲ್ವೆ ಯಾರ್ಡುಗಳಲ್ಲಿ, ಬಂದರುಗಳಲ್ಲಿ ಹೆಚ್ಚು. ಇವುಗಳ ಹತ್ತಿರದಲ್ಲಿ ವಾಸಮಾಡುವ ಜನರಿಗೂ ಮತ್ತು ಕೆಲಸಗಾರರಿಗೂ ಇದರಿಂದಾಗುವ ಪರಿಣಾಮ ಹೆಚ್ಚು. ಆದುದರಿಂದ ವಾಸದ ಮನೆಗಳು ಇವುಗಳಿಂದ ದೂರವಾಗಿರಬೇಕು. ಫ್ಯಾಕ್ಟರಿಗಳವರು ಹೊಗೆ ಮತ್ತು ಧೂಳನ್ನು ವಾತಾವರಣ ಕೆಡಿಸುವುದಕ್ಕೆ ಬಿಡದೆ ವಿವಿಧ ಮಾದರಿಯ ತಡೆಗಳಿಂದ ಅವುಗಳನ್ನು ಅಲ್ಲಿಯೇ ಸೆರೆಹಿಡಿಯಬಹುದು. ಸೆರೆಹಿಡಿಯುವ ಮಾರ್ಗಗಳನ್ನು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿ ಒದಗಿಸಬಲ್ಲನು. ಧೂಳು ಮತ್ತು ಹೊಗೆಯನ್ನು ಸೆರೆಹಿಡಿ

ಯುವುದರಿಂದಾಗುವ ಲಾಭವನ್ನೂ ಫ್ಯಾಕ್ಟರಿ ಮಾಲೀಕನಿಗೆ ತೋರಿಸಬಹುದು. ಅವು ಯಾವುವೆಂದರೆ:—

(೧) ಕಲ್ಲಿದ್ದಲು ಪೂರ್ತಿಯಾಗಿ ಉರಿದು ಹೋಗುವುದಕ್ಕೆ ಅವಕಾಶ ಮಾಡಿಕೊಡುವುದರಿಂದ, ಕಲ್ಲಿದ್ದಲಿನ ವೆಚ್ಚವು ಕಡಿಮೆ ಯಾಗುವುದಲ್ಲದೆ, ಧೂಳು ಮತ್ತು ಹೊಗೆಯೂ ಕಡಿಮೆಯಾಗು ವುದು. ಇದಕ್ಕೆ ಬೇಕಾದುದು ಪುಷ್ಕಳವಾದ ಗಾಳಿಯ ಸರಬ ರಾಜು, ಒಲೆಗೆ ಆಗಬೇಕು. ಅಲ್ಲದೆ ಸರಿಯಾದ ಮಾದರಿಯಲ್ಲಿ ಚಿಮಣಿಯನ್ನು ನಿರ್ಮಿಸುವುದರಿಂದ ಕಲ್ಲಿದ್ದಲಿನ ಉಪಯುಕ್ತತೆ ಮತ್ತು ಶಾಖವನ್ನು ಪೋಲಾಗದಂತೆ ನೋಡಿಕೊಳ್ಳಬಹುದು. ಚಿಮಣಿಯನ್ನು ಎತ್ತರವಾಗಿ ನಿರ್ಮಿಸುವುದರಿಂದ ಪೂರ್ತಿಯಾಗಿ ಉರಿಯದ ಕಲ್ಲಿದ್ದಲಿನ ಚೂರುಗಳು ಹೊರಗೆ ಬರದಂತೆ ತಡೆಯ ಬಹುದು.

(೨) ಎಲ್ಲೆಲ್ಲಿ ವಿದ್ಯುಚ್ಛಕ್ತಿಯಿಂದ ಶಾಖವನ್ನು ಪಡೆಯಲು ಸಾಧ್ಯವೋ ಅಲ್ಲೆಲ್ಲಾ ಉಪಯೋಗಿಸಿಕೊಳ್ಳಬೇಕು. ಇದರಿಂದ ವಾತಾವರಣವು ಕೆಡುವುದು ಕಡಿಮೆಯಾಗುತ್ತದೆ.

ರಸ್ತೆಗಳ ಮೇಲ್ಭಾಗವನ್ನು ಸುಧಾರಿಸುವುದರಿಂದಲೂ ಮತ್ತು ನೀರನ್ನು ಸಿಂಪಡಿಸುವುದರಿಂದಲೂ ರಸ್ತೆಯಲ್ಲಿ ಧೂಳು ಕಡಿಮೆ ಯಾಗುವಂತೆ ಮಾಡಬಹುದು.

ಫ್ಯಾಕ್ಟರಿಗಳಲ್ಲಿ ಸರಿಯಾದ ಸ್ಥಳದಲ್ಲಿ ತಕ್ಕುದಾದ ಹುಡ್‌ಗಳು, ಎಕ್ಸಾಸ್ಟ್ ಫ್ಯಾನ್‌ಗಳು ಮತ್ತು ಇತರೆ ಧೂಳು ಮತ್ತು ಹೊಗೆ ಯನ್ನು ಸೆರೆಹಿಡಿಯುವ ಸಾಧನಗಳಿಂದ ಮತ್ತು ಪೈಪುಗಳಿಂದ, ವಾತಾವರಣವನ್ನು ಕೆಡಿಸುವ ಧೂಳು ಮತ್ತು ಹೊಗೆಯನ್ನು ಹತೋಟಿಯಲ್ಲಿಟ್ಟುಕೊಳ್ಳಬಹುದು.

ವಿದ್ಯುಚ್ಛಕ್ತಿ ಇರುವ ನಗರಗಳಲ್ಲಿ ಸಿನಿಮಾ ಮಂದಿರಗಳಿಗೆ ಏರ್ ಕಂಡೀಷನಿಂಗ್ ಅಥವಾ ಗಾಳಿಯ ಲಕ್ಷಣಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವ ಸಾಧನಗಳು ಮತ್ತು ಸೌಕರ್ಯಗಳನ್ನು ಒದಗಿಸಬೇಕು. ಈ ಮೇಲ್ಕಂಡ ಕಾರ್ಯಗಳನ್ನು ತೃಪ್ತಿಕರವಾಗಿ ನಡಸಲು ಜನಾರೋಗ್ಯ ಇಂಜನೀಯರ್ ಸಲಹೆ ತೆಗೆದುಕೊಳ್ಳಬೇಕು.

## ೮. ಜನಸಂದಣಿ ಸೇರುವ ಸ್ಥಳಗಳು

## ಕ್ಯಾಂಪುಗಳು, ಹಬ್ಬಗಳು ಮತ್ತು ಜಾತ್ರೆಗಳು

ನಮ್ಮ ದೇಶದಲ್ಲಿ ಹಬ್ಬಹರಿದಿನಗಳಿಗೆ ಮತ್ತು ಜಾತ್ರೆಜಂಗುಳಿಗಳಿಗೆ ಏನೂ ಕೊರತೆ ಇಲ್ಲ. ಸಾವಿರಗಟ್ಟಲೆ, ಲಕ್ಷಗಟ್ಟಲೆ ಜನ ಸೇರುತ್ತಾರೆ. ಇಂತಹ ಸಮಯಗಳಲ್ಲಿ ಕೊಡುವ ಬಾಡಿಗೆ ವಸತಿ ಬಹಳ ಶೋಚನೀಯ. ಆದುದರಿಂದ ಈ ಕೆಳಗೆಕಂಡ ಕೆಲವು ನಿಯಮಗಳನ್ನು ವಸತಿ ಕೊಡುವವರಿಗೆ ಅನ್ವಯಿಸುವುದು ಉತ್ತಮ.

(೧) ವಾಸಕ್ಕೆ ಯೋಗ್ಯವಾದ ಕೊಠಡಿಯು ೭೦೦ ಚ. ಅ (೭೦ ಚ. ಮೀ) ಗಳಿಗಿಂತ ಕಡಿಮೆ ಇರಬಾರದು.

(೨) ಕೊಠಡಿಗಳ ಎತ್ತರವು ೧೦ ಅಡಿಗಳಿಗಿಂತ (೩ ಮೀ) ಕಡಿಮೆ ಇರಬಾರದು.

(೩) ಕಿಟಕಿಗಳ ವಿಸ್ತಾರವು ಕೊಠಡಿಯ ನೆಲದ ವಿಸ್ತಾರಕ್ಕಿಂತ ಶೇಕಡಾ ೧೦ ಕ್ಕಿಂತ ಕಡಿಮೆ ಇರಬಾರದು.

(೪) ಅಡಿಗೆ ಮಾಡುವ ಸ್ಥಳವು ವಾಸಿಸುವ ಸ್ಥಳದಿಂದ ಬೇರೆಯಾಗಿರಬೇಕು. ಇಲ್ಲವೇ ವಾಸಿಸುವ ಮನೆಯ ಒಳ ಆವರಣ ಅಥವಾ ವೆರಾಂಡದಲ್ಲಿ ಅಡಿಗೆ ಮಾಡುವುದಕ್ಕೆ ಸೌಕರ್ಯವಿರಬೇಕು.

(೫) ಪ್ರತಿಯೊಂದು ವಾಸದ ಕೊಠಡಿಗೂ ಒಂದು ಸ್ನಾನದ ಮನೆ, ಒಂದು ಕಕ್ಕಸಿನ ಸೌಲಭ್ಯವಿರಬೇಕು, ನೆಲಕ್ಕೆ ಸೀಮೆಂಟ್ ಮಾಡಿರಬೇಕು.

ಮೇಲಿನ ನಿಯಮಗಳನ್ನು ಪಾಲಿಸುವಂತೆ ಮಾಡಲು ಜನಾರೋಗ್ಯ

ಇಂಜನೀಯರ್ ಅಥವಾ ಶಿಲ್ಪಿಯನ್ನು ನೇಮಿಸಬೇಕು. ಯಾರಾದರೂ ಪಾಲಿಸದಿದ್ದಲ್ಲಿ ಸರ್ಕಾರದವರೇ ಜನಾರೋಗ್ಯ ಇಂಜನೀಯರ್ ಮೂಲಕ ಕೆಲಸಮಾಡಿಸಿ ಹಣವನ್ನು ಧರ್ಮಶಾಲಾ ಅಥವಾ ಛತ್ರದವರ ಮೂಲಕ ವಸೂಲು ಮಾಡಬೇಕು.

ಪುಣ್ಯಕ್ಷೇತ್ರಗಳಲ್ಲೆಲ್ಲಾ ಪೈಪಿನ ಮೂಲಕ ನೀರು ಸರಬರಾಯಿ ಮಾಡುವ ವ್ಯವಸ್ಥೆ ಇರಬೇಕು. ೫೦,೦೦೦ ಕ್ಕಿಂತ ಹೆಚ್ಚು ಜನ ಸೇರುವ ಕಡೆ ಪ್ರತಿ ಯಾತ್ರಿಕನಿಗೆ ದಿನಂಪ್ರತಿ ಕೊನೆಯ ಪಕ್ಷ ೬ ಗ್ಯಾಲನ್ನುಗಳಂತೆ (೩೦ ಲೀಟರ್) ಲೆಕ್ಕಮಾಡಿ ಪ್ರತಿ ೧೫೦ ಜನರಿಗೊಂದರಂತೆ ಕೊಳಾಯಿಗಳನ್ನು ನಿರ್ಮಿಸಿ ಶುದ್ಧವಾದ ನೀರು ಸರಬರಾಯಿ ಮಾಡಬೇಕು.

ಪುಣ್ಯಕ್ಷೇತ್ರಗಳಿಗೆ ಬಾವಿ ಅಥವಾ ಹಗೇವು ಕಕ್ಕಸುಗಳು ಉತ್ತಮ. ೬ ಅಡಿ ಅಗಲದ (೨ ಮೀ) ಮತ್ತು ಉದ್ದದ ಒಂದು ಬಾವಿಯನ್ನು ತೋಡಿ ಅದರ ನಾಲ್ಕು ಮೂಲೆಗೂ ಒಂದೊಂದು ಕಕ್ಕಸನ್ನು ಜೋಡಿಸಬಹುದು. ಬಾವಿಯನ್ನು ಕಾಂಕ್ರೀಟ್ ಚಪ್ಪಡಿಯಿಂದ ಮುಚ್ಚಬೇಕು. ಬಾವಿಯ ಆಳ ೧೫-೨೦ ಅಡಿ (೫-೬ ಮೀ) ಗಳಿರಬಹುದು, ಅಥವಾ ಭೂಗರ್ಭಜಲದ ಮಟ್ಟದಿಂದ ೩ ಅಡಿಗಳು (೧ ಮೀ) ಕೆಳಗೆ ಹೋಗಬೇಕು. ಈ ಮಾದರಿಯ ಕಕ್ಕಸುಗಳು ಹತ್ತಿರದ ಕುಡಿಯುವ ನೀರಿನ ಬಾವಿಗಿಂತ ಕೊನೆಯ ಪಕ್ಷ ೩೦ ಅಡಿ (೧೦ ಮೀ) ದೂರವಿರಬೇಕು. ಕೈಕಾಲು ಮೊದಲಾದುವನ್ನು ತೊಳೆದುಕೊಳ್ಳುವುದಕ್ಕೆ ೫೦ ಅಡಿಗಳ (೧೫ ಮೀ) ದೂರದ ಒಳಗೆ ನೀರು ಸರಬರಾಜು ವ್ಯವಸ್ಥೆ ಇರಬೇಕು.
ಕಸಕಡ್ಡಿಗಳನ್ನು ಹಾಕುವುದಕ್ಕೆ ತೊಟ್ಟಿ ಇಡ್ದು ಅಲ್ಲಿಂದ ಅವುಗಳನ್ನು ಜಾತ್ರೆಯ ಸ್ಥಳದಿಂದ ೧/೨ ಮೈಲಿಯ (೦.೮ ಮೀ)

ದೂರದ ಆಚೆ ಸಾಗಿಸಿ ವಿಸರ್ಜಿಸಬೇಕು ಮತ್ತು ನೊಣಗಳ
ಸೇರಲು ಅವಕಾಶ ಕೊಡಬಾರದು.

ಪುಣ್ಯ ಕ್ಷೇತ್ರಗಳ ಮೇಲ್ವಿಚಾರಣೆ ನೋಡಿಕೊಳ್ಳುವುದಕ್ಕೆ
ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯನ್ನು ನೇಮಿಸ
ಬೇಕು.

## ಸ್ಕೂಲುಗಳು ಅಥವಾ ಪಾಠಶಾಲೆಗಳು

ಹುಡುಗರು ಎಲ್ಲರೂ ಒಟ್ಟಾಗಿ ಪಾಠಶಾಲೆಗಳಲ್ಲಿ ಸೇರುತ್ತಾರೆ
ಕಾಯಿಲೆ ಇರುವ ಹುಡುಗರಿಂದ ಅಂಟುರೋಗಗಳು ಬೇರೆಯವ
ರಿಗೆ ಹರಡುತ್ತವೆ. ಮನೋವಿಕಾಸವುಂಟಾಗುವ ಪಾಠಶಾ
ಗಳಲ್ಲಿ ವಾತಾವರಣವು ಆರೋಗ್ಯಕರವಾಗಿದ್ದು, ಉತ್ಸಾ
ದಾಯಕವಾಗಿರಬೇಕು. ಸ್ಕೂಲುಗಳಲ್ಲಿ ಹರಡುವ ಕಾಯಿ
ಗಳಲ್ಲಿ ಡಿಪ್ತೀರಿಯಾ, ಮೀಸಲ್ಸ್, ನೆಗಡಿ ಮೊದಲಾದು
ಮುಖ್ಯವಾದವು.

ಪ್ರತಿಯೊಂದು ಪಾಠಶಾಲೆಗೂ ಆಟದ ಮೈದಾನವಿರಬೇಕು
ಆಟದ ಮೈದಾನವನ್ನೂ ಸೇರಿಕೊಂಡು ಸ್ಕೂಲಿನ ಆವರಣ
ಪ್ರತಿ ವಿದ್ಯಾರ್ಥಿಗೆ೯೦ ಚ.ಅ. ಗಳಷ್ಟು (೧೦ ಚಮೀ) ಇರಬೇಕು
ಸ್ಕೂಲುಎತ್ತರವಾದ, ತೇವವಿಲ್ಲದ ಸ್ಥಳದಲ್ಲಿ ಇರಬೇಕು. ರೇ
ಯೋಆಲೆಗಳಂತೆ ಹೊರಡುವ ಉಪಾಧ್ಯಾಯರ ಎಂಜಲು ವಿದ್
ರ್ಥಿಗಳ ಮುಖದ ಮೇಲೆ ಬೀಳದಷ್ಟು ದೂರ ಅಂದರೆ ಸುಮಾ
$7^1/_2$ ಅಡಿಗಳಷ್ಟು ($2^1/_2$ ಮೀ) ದೂರದಲ್ಲಿ ಉಪಾಧ್ಯಾಯ
ಮತ್ತು ವಿದ್ಯಾರ್ಥಿಗಳ ಸ್ಥಾನಗಳಿರಬೇಕು. ಪಾಠಶಾಲೆಯ ಒಳ
ಪ್ರತಿಯೊಬ್ಬ ವಿದ್ಯಾರ್ಥಿಗೂ ಕೊನೆಯ ಪಕ್ಷ ೬ ಚ.ಅ. ಗಳಷ
(೨ಚ. ಮೀ) ವಿಸ್ತಾರವಾದ ನೆಲವಾದರೂ ಇರಬೇಕು. ಪಾ

ನಡೆಯುವ ಕೊಠಡಿಯ ವಿಸ್ತಾರವು ೧೫೦ ಚ.ಅ. (೧೫ಚ.ಮೀ) ಗಳಿಗಿಂತ ಕಡಿಮೆ ಇರಬಾರದು. ಕೊನೆಯ ಪಕ್ಷ ೫೦ ಗಜ (೫೦.ಮೀ) ದೂರದೊಳಗಾದರೂ ಒಂದು ಕುಡಿಯುವ ನೀರಿನ ನಲ್ಲಿ ಇರಬೇಕು; ಮತ್ತು ೬೦ ವಿದ್ಯಾರ್ಥಿಗಳಿಗೊಂದರಂತೆ ಆದರೂ ಒಂದು ಮೂತ್ರಿ ಇರಬೇಕು. ೧೦,೦೦೦ ಜನಸಂಖ್ಯೆಗೆ ಒಂದರಂತೆಯಾದರೂ ಪಾಠಶಾಲೆ ಇರಬೇಕು.

ಪೂರ್ವ ಮತ್ತು ಪಶ್ಚಿಮದ ಕಡೆಗಿರುವ ಕಿಟಕಿಗಳಿಗೆ ಮರೆಯಾಗಲೀ, ವೆರಾಂಡವಾಗಲೀ ಇದ್ದು ನೇರವಾಗಿ ಬರುವ ಸೂರ್ಯನ ಕಿರಣಗಳನ್ನು ತಡೆಯಬೇಕು. ಕಿಟಕಿಗಳ ಮೂಲಕವಾಗಲೀ ಅಥವಾ ಗೋಡೆಯಲ್ಲಿ ಬಿಟ್ಟಿರುವ ಖುಲ್ಲಾ ಸ್ಥಳದಿಂದ ಬರುವ ಗಾಳಿ ಬೆಳಕಿಗಾಗಲಿ ಇರುವ ವಿಸ್ತೀರ್ಣವು, ಆ ಕೊಠಡಿಯ ನೆಲದ ವಿಸ್ತೀರ್ಣದ ಶೇಕಡಾ ೭೦ ಭಾಗವಾದರೂ ಇರಬೇಕು. ಕಿಟಕಿಗಳು ಎದುರುಬದರಾಗಿ ಗೋಡೆಯ ಎರಡು ಕಡೆಗಳಲ್ಲಿಯೂ ಇದ್ದು ಗಾಳಿ ಬೆಳಕುಗಳ ಸಂಚಾರಕ್ಕೆ ಅಡ್ಡಿಯಿಲ್ಲದಂತಿರಬೇಕು.

ಮೂತ್ರಿ ಕಕ್ಕಸುಗಳು ಬೇರೆ ಬೇರೆಯಾಗಿ ಉಪಾಧ್ಯಾಯರಿಗೂ ವಿದ್ಯಾರ್ಥಿಗಳಿಗೂ, ಮತ್ತು ವಿದ್ಯಾರ್ಥಿನಿಯರಿಗೂ ಇರಬೇಕು ೪೦ ಜನರಿಗೊಂದರಂತೆ ಮೂತ್ರಿಯೂ, ೬೦ ಜನರಿಗೊಂದರಂತೆ ಕಕ್ಕಸೂ ಇರಬೇಕು. ಕೈಕಾಲು ತೊಳೆದುಕೊಳ್ಳುವುದಕ್ಕೆ ಮತ್ತು ಕುಡಿಯುವುದಕ್ಕೆ ೫೦ ಜನರಿಗೆ ಒಂದರಂತೆ ಕೊಳಾಯಿ ಇರಬೇಕು. ಕಕ್ಕಸು ಮತ್ತು ಮೂತ್ರಿಗಳನ್ನು ಸೆಪ್ಟಿಕ್ ಟ್ಯಾಂಕ್‌ಗಳಿಗಾಗಲೀ ಭಾವಿ ಕಕ್ಕಸುಗಳಿಗಾಗಲೀ ಲಗತ್ತಿಸಬೇಕು. ಪಾಠಶಾಲೆಗಳ ನಿರ್ಮಾಣಕ್ಕೆ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆ ತೆಗೆದುಕೊಳ್ಳಬೇಕು.

## ಜನ ಮನರಂಜನಾ ಗೃಹಗಳು

ಮನೆಕಟ್ಟುವ ಸಾಮಗ್ರಿಗಳ ಅಭಾವವಿದ್ದರೂ ಸಿನಿಮಾ ಥಿಯೇಟರುಗಳು ದಿನದಿನಕ್ಕೆ ಹೆಚ್ಚುತ್ತಲಿವೆ. ಕೂಲಿಗಾರರ ಮತ್ತು ಮಧ್ಯಮವರ್ಗದವರ ಜೀವನದಲ್ಲಿರುವ ಕಷ್ಟಕಾರ್ಪಣ್ಯಗಳನ್ನು ಮರೆಯಲು ಸಿನಿಮಾಗೃಹಗಳು ಕೆಲಕಾಲದ ಮಟ್ಟಿಗಾದರೂ ಸಹಾಯಕಾರಿಯಾಗಿವೆ. ಪಟ್ಟಣಗಳಲ್ಲಿರುವ ಸಿನಿಮಾ ಗೃಹಗಳ ರಚನಾವಿಧಿ ಸಾಕಷ್ಟು ತೃಪ್ತಿಕರವಾಗಿದೆ. ಮುನಿಸಿಪಲ್ ಕಾನೂನುಗಳು ಮತು ಒಳ್ಳೆಯ ಸಿನಿಮಾ ಗೃಹಗಳಮೇಲೆ ಜನರಿಗಿರುವ ಅಭಿರುಚಿ ಸಿನಿಮಾ ಮಂದಿರಗಳು ನಗರಗಳಲ್ಲಿ ಸಾಕಷ್ಟು ಅಚ್ಚುಕಟ್ಟಾಗಿಯೂ, ನಾಜೂಕಾಗಿಯೂ ಇರಲು ಸಹಾಯ ಮಾಡಿವೆ. ಆದರೆ ಸಣ್ಣಪಟ್ಟಣಗಳಲ್ಲಿ ಇವುಗಳ ಸ್ಥಿತಿ ಶೋಚನೀಯ.

ಪ್ರತಿ ಸಿನಿಮಾ ಮಂದಿರದಲ್ಲಿಯೂ ಬೆಂಕಿ ಆರಿಸುವ ಸಾಧನಗಳಿರಬೇಕು. ಪ್ರತಿ ನೂರು ಸೀಟುಗಳಿಗೆ ಒಂದರಂತೆ ಕೊನೆಯಪಕ್ಕ ೭ × ೪ ಅಡಿಯ (೨ × ೧ ಮೀ) ಒಂದು ಬಾಗಿಲಿರಬೇಕು. ಇವುಗಳನ್ನು ಪರದೆಯಿಂದ ಮುಚ್ಚಿರಬೇಕು. ಮನರಂಜನಾ ಮಂದಿರದಲ್ಲಿಕೂಡಲು ಸ್ಥಳವಿರುವ ಸಂಖ್ಯೆಯ ಮೇಲೆ ಪ್ರತಿಪ್ರೇಕ್ಷಕನಿಗೂ ೫ ಚ.ಅ. (೦.೫ ಚ.ಮೀ) ಗಳಷ್ಟು ಸ್ಥಳವ ಅಥವಾ ನೆಲದ ಅಂದಾಜಿನ ಮೇಲೆ ಸಿನಿಮಾ ಗೃಹದ ಉದ್ದ ಅಗಲಗಳಿರಬೇಕು. ಪ್ರತಿ ಸಿನಿಮಾ ಮಂದಿರದಲ್ಲಿಯೂ ಹೆಚ್ಚುಗಾಳಿಯ ಚಲನೆಯಿರಬೇಕು. ಇದನ್ನು ಸಾದಾ ಪಂಕಾಗಳ ಮೂಲಕವೂ ಮತ್ತು ಎಕ್ಸಾಸ್ಟ್ ಅಥವಾ ಗಾಳಿ ಹೀರುವ ಪಂಕಾಗಳ ಮೂಲಕವೂ ಘಂಟೆಗೆ ೬ ಸಲವಾದರೂ ಗಾಳಿ ಬದಲಾಗುವಂತೆ ವ್ಯವಸ್ಥೆ ಇರ

ಬೇಕು. ಹೊಗೆಯನ್ನು ಕಡಿಮೆ ಮಾಡುವುದಕ್ಕೋಸ್ಕರ ಬೀಡಿ ಚುಟ್ಟಾವಗೈರೆ ಸೇದುವುದನ್ನು ಮನ್ನಾ ಮಾಡಬೇಕು.

ಪ್ರೇಕ್ಷಕರಿಗೂ, ಕೆಲಸಮಾಡುವವರಿಗೂ ಬೇರೆ ಬೇರೆಯಾಗಿ ಕಕ್ಕಸು ಮತ್ತು ಮೂತ್ರಿಗಳಿರಬೇಕು. ಇವು ೭೫ ಜನರಿಗೊಂದ ರಂತೆ ಇರಬೇಕು. ಅವುಗಳಲ್ಲಿ ಮುಕ್ಕಾಲು ಭಾಗ ಗಂಡಸರಿಗೂ, ಕಾಲುಭಾಗ ಹೆಂಗಸರಿಗೂ ಇದ್ದರೆ ಸಾಕು. ಅದೇ ಸಂಖ್ಯೆಯಲ್ಲಿ ಕುಡಿಯಲು ಮತ್ತು ಕೈಕಾಲು ಮೊದಲಾದುವುಗಳನ್ನು ತೊಳೆಯಲು ನಲ್ಲಿಗಳಿರಬೇಕು.

ಮನರಂಜನಾ ಗೃಹಗಳ ನಕ್ಷೆ ತಯಾರಿಸುವಾಗ ಮತ್ತು ಕಟ್ಟಡ ನಿರ್ಮಾಣ ಮಾಡುವಾಗ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆಗಳನ್ನು ತೆಗೆದುಕೊಳ್ಳಬೇಕು. ಈತನು ಜನಾರೋಗ್ಯಕ್ಕೆ ಸಂಬಂಧ ಪಟ್ಟ ವಿಷಯಗಳನ್ನು ಪರಿಶೀಲಿಸುವನು.

## ೯. ಗಲೀಜು ನೀರಿನಿಂದ ನದಿ, ಸರೋವರ ಮತ್ತು ಸಮುದ್ರ ತೀರಗಳು ಕೆಡುವಿಕೆ

ನಮ್ಮ ದೇಶದಲ್ಲಿ ನದಿ, ಸರೋವರ, ಮತ್ತು ಸಮುದ್ರ ತೀರವನ್ನು ಪೂಜಿಸುತ್ತಾರೆ, ಮತ್ತು ಅವುಗಳಲ್ಲಿ ಸ್ನಾನ ಮಾಡುವುದು ಪುಣ್ಯಕರವೆಂದು ಭಾವಿಸುತ್ತಾರೆ. ಆದರೆ ಇವುಗಳ ನೀರನ್ನು ಜನರು ಮಲಮೂತ್ರಗಳಿಂದಲೂ, ಫ್ಯಾಕ್ಟರಿ ಮತ್ತು ಮುನಿಸಿಪಾಲಿಟಿಗಳವರು ತಮ್ಮಲ್ಲಿನ ಗಲೀಜು ನೀರಿನಿಂದಲೂ ಅಪವಿತ್ರ ಮತ್ತು ಅಶುಚಿಗೊಳಿಸುತ್ತಾರೆ. ಅವರು ಈ ರೀತಿ ಮಾಡುವಾಗ ಬೇರೆ ಜನರ ಆರೋಗ್ಯದ ಕಡೆ ಗಮನ ಕೊಡುವುದಿಲ್ಲ; ಮತ್ತು ನೀರಲ್ಲಿರುವ ಪ್ರಾಣಿಗಳ ಆರೋಗ್ಯಕ್ಕೂ, ನೀರಿನ ಸೌಂದರ್ಯದ ಕಡೆಗೂ ಗಮನ ಕೊಡುವುದಿಲ್ಲ. ಈ ರೀತಿ ಮಾಡುವುದರಿಂದ ನೀರು ಕಪ್ಪಾಗುವುದಲ್ಲದೆ, ನೀರಿನಲ್ಲಿ ಇರಬೇಕಾದ ಆಮ್ಲಜನಕದ ಪ್ರಮಾಣವು ಕಡಿಮೆಯಾಗುತ್ತದೆ. ಮತ್ತು ನೀರಿನಿಂದ ಕೆಟ್ಟ ವಾಸನೆ ಬರುತ್ತದೆ. ಈ ರೀತಿ ಆಗುವುದನ್ನು ಆದಷ್ಟು ಮಟ್ಟಿಗೆ ಕಡಿಮೆ ಮಾಡಬೇಕು.

ಈ ಕೆಳಕಂಡ ಕೆಲವು ಸೂತ್ರಗಳನ್ನಾದರೂ ಸಾರ್ವಜನಿಕ ನೀರಿನ ಪಾರಿಶುದ್ಧತೆಗೆ ಅನುಸರಿಸಬೇಕಾದುದು ಬಹಳ ಅವಶ್ಯಕ.

(೧) ಜನರು ಪೂಜಿಸುವ, ಸ್ನಾನಮಾಡಿದರೆ ಪುಣ್ಯಕರವೆಂದು ಭಾವಿಸುವ ಮತ್ತು ಅದರ ನೀರನ್ನು ತೀರ್ಥವೆಂದು ಭಾವಿಸುವ ನದಿಗಳ ನೀರಿನಲ್ಲಿ ಸೇರಿರುವ ಆಮ್ಲಜನಕದ ಪ್ರಮಾಣವು ದಶಲಕ್ಷ ಭಾಗಗಳ ನೀರಿನಲ್ಲಿ ೩ ಭಾಗನಾದರೂ ಇರುವಂತೆ ಮತ್ತು ಇಂಗಾಲಾಮ್ಲದ ಪ್ರಮಾಣವು ದಶಲಕ್ಷ ಭಾಗಗಳಿಗೆ ೪೦ ಭಾಗ

ಕ್ಕಿಂತ ಹೆಚ್ಚದಂತೆ ನೋಡಿಕೊಳ್ಳಬೇಕು.

(೨) ನದಿಯ ಲಕ್ಷಣಗಳನ್ನು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯು ಪರೀಕ್ಷಿಸಿ ಮತ್ತು ಅದರೊಳಗೆ ಬಿಡುವ ಗಲೀಜು ನೀರಿನ ಲಕ್ಷಣಗಳನ್ನೂ ಪರಿಶೀಲಿಸಿ, ತನ್ನ ಸಲಹೆ ಕೊಡಬೇಕು.

(೩) ಮಲಮೂತ್ರಗಳಿಂದ ಕೂಡಿದ ನೀರಾಗಲೀ ಅಥವಾ ಕೈಗಾರಿಕಾ ಕ್ಷೇತ್ರಗಳಿಂದ ವಿಸರ್ಜಿಸಲ್ಪಟ್ಟ ಕಲ್ಮಶವುಳ್ಳ ನೀರಾಗಲೀ ನದಿ ಮೊದಲಾದುವುಗಳಿಗೆ ಬಿಡುವ ಮೊದಲು, ಆ ನದಿಗೆ ಅಥವಾ ಸರೋವರಕ್ಕೆ ಗಲೀಜು ನೀರನ್ನು ಬಿಟ್ಟರೂ, ಅದನ್ನು ಸ್ವೀಕರಿಸುವ ಜಲಾಶಯವು ಕೆಡದಂತೆಯೂ, ಜಾಗ್ರತೆ ಸ್ವಯಂ ಶುದ್ಧವಾಗುವ ಶಕ್ತಿಯಿಂದ ಕೂಡಿದ್ದಾಗಿಯೂ ಇರಬೇಕು; ಅಥವಾ ಸರೋವರದ ಸ್ವಯಂಶುದ್ಧವಾಗುವ ಶಕ್ತಿಯನ್ನು ನೋಡಿಕೊಂಡು ಸಾಧ್ಯವಾದಮಟ್ಟಿಗೆ ಶುದ್ಧೀಕರಣಗೊಳಿಸಿ ವಿಸರ್ಜನೆ ಮಾಡಬೇಕು. ಆದುದರಿಂದ ಕಲ್ಮಶವುಳ್ಳ ವಿಸರ್ಜಿಸಿದ ನೀರನ್ನು ನದಿ ಅಥವಾ ಸರೋವರಕ್ಕೆ ಬಿಡುವ ಮೊದಲು, ಅದಕ್ಕೆ ಯಾವ ರೀತಿಯಾದ ಶುದ್ಧೀಕರಣವನ್ನು ಕೊಡಬೇಕು, ಅದಕ್ಕೆ ಬೇಕಾದ ಯಂತ್ರ ಮತ್ತು ಸಲಕರಣೆಗಳೇನು ಎಂಬುದನ್ನು ವಿವೇಚಿಸಲು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ವಿಶೇಷ ಪ್ರವೀಣತೆಗೆ ಬಿಡಬೇಕು.

(೪) ಕೆಲವು ಸಮಯಗಳಲ್ಲಿ, ಅಂದರೆ ಬೇಸಿಗೆಯಲ್ಲಿ ಜಲಮಲಗಳಿಂದ ಕೂಡಿದ ನೀರನ್ನು ನೆಲದ ಮೇಲೆ ಹೀರಿಕೊಳ್ಳುವುದಕ್ಕೆ ಬಿಟ್ಟು, ಆ ನೀರಿನ ಸಹಾಯದಿಂದ ತೋಟಗಾರಿಕೆಯನ್ನು ಮಾಡ

ಬಹುದು, ಮತ್ತು ಮಳೆಗಾಲದಲ್ಲಿ ನದಿಗಳು ತುಂಬಿ ಹರಿಯುವು ದರಿಂದ ಆ ಕಾಲದಲ್ಲಿ ಅಂತಹ ನೀರನ್ನು ಆ ನದಿಗಳಿಗೆ ಬಿಡುವು ದರಿಂದ ಯಾವ ಬಾಧಕವೂ ಇರುವುದಿಲ್ಲ. ಇದರಿಂದ ಬೆಲೆ ಬಾಳುವ ಯಂತ್ರೋಪಕರಣಗಳನ್ನು ತರಿಸುವುದು ತಪ್ಪುವುದಲ್ಲದೆ, ತೋಟಗಾರಿಕೆಯಿಂದ ಸ್ವಲ್ಪ ಹಣವೂ ಬರುತ್ತದೆ.

## ೧೦. ಕೈಗಾರಿಕಾ ಕ್ಷೇತ್ರಗಳ ವಾತಾವರಣ

ಇಂಡಿಯಾ ದೇಶದಲ್ಲಿ ನಾವು ಯೋಚಿಸುವುದಕ್ಕಿಂತ ಶೀಘ್ರ ವಾಗಿ ಕೈಗಾರಿಕೆಗಳು ಬೆಳೆಯುತ್ತಿವೆ. ಅದರಿಂದಾಗಿ ಜನರು ಹೆಚ್ಚು ಹೆಚ್ಚಾಗಿ ನಗರಗಳನ್ನು ಸೇರುತ್ತಲಿದ್ದಾರೆ. ಜನನಿಬಿಡ ವಾದ ಸ್ಥಳಗಳೂ ಕೊಳಕು ಪ್ರದೇಶಗಳೂ ಹೆಚ್ಚುತ್ತಲಿವೆ. ಜನರು ಪಟ್ಟಣಗಳನ್ನು ಸೇರುವ ಪ್ರಮಾಣದಲ್ಲೇ ಪಟ್ಟಣಗಳಲ್ಲಿ ವಾಸದ ಮನೆಗಳು ಹೆಚ್ಚುತ್ತಿಲ್ಲ.

ಕೈಗಾರಿಕಾ ವಾತಾವರಣವನ್ನು ಗಮನಿಸುವಾಗ ಕಾರ್ಮಿಕನು ಕೆಲಸ ಮಾಡುವ ಸ್ಥಳ, ಆತನು ವಾಸ ಮಾಡುವ ಸ್ಥಳ ಮತ್ತು ಆತನು ವಿರಾಮ ಕಾಲವನ್ನು ಕಳೆಯುವ ಸ್ಥಳ ಮೊದಲಾದುವನ್ನು ಗಮನಿಸಬೇಕು. ಪ್ರತಿಯೊಂದು ಕಾರ್ಖಾನೆಯ ಮಾಲೀಕನೂ ತನ್ನ ಕೆಲಸಗಾರರಿಗೆ ಗೃಹ ವಸತಿ ಕಲ್ಪಿಸಬೇಕು.

ಪ್ರತಿ ಕೈಗಾರಿಕಾ ಕ್ಷೇತ್ರವನ್ನು ಅಥವಾ ಒಂದು ಕಾರ್ಖಾನೆ ಯನ್ನು ನಾಲ್ಕು ಭಾಗವಾಗಿ ವಿಂಗಡಿಸಬಹುದು.

ಮೊದಲನೆಯದಾಗಿ ಕಚ್ಚಾ ಮಾಲುಗಳನ್ನು ಸಂಗ್ರಹಿಸುವ ಸ್ಥಳ. ಈ ಸ್ಥಳವು ಭದ್ರವಾಗಿಯೂ, ಬೆಂಕಿಯ ಅಪಘಾತಕ್ಕೆ ಈಡಾಗದಂತೆಯೂ, ಜನರು ಸಾಮಾನು ಸಾಗಿಸುವುದಕ್ಕೆ ಸಾಕಷ್ಟು ಬೆಳಕುಳ್ಳದ್ದಾಗಿಯೂ ಮತ್ತು ಕೊನೆಯ ಪಕ್ಷ ಘಂಟೆಗೊಂದಾವರ್ತಿಯಾದರೂ ಹೊಸಗಾಳಿ ಬದಲಾಯಿಸು ವಂತೆಯೂ ಅನುಕೂಲಉಳ್ಳದ್ದಾಗಿ ಇರಬೇಕು.

ಎರಡನೆಯದಾಗಿ ಕಚ್ಚಾ ಮಾಲುಗಳನ್ನು ಪರಿವರ್ತಿಸುವ ಸ್ಥಳವು; ಇದು ಇಡೀ ಕಾರ್ಖಾನೆಯಲ್ಲಿ ಬಹಳ ಮುಖ್ಯವಾದುದು.

ಇಲ್ಲಿಕೆಲಸಗಾರರೆಲ್ಲರೂ ಅವರವರ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಈ ಸ್ಥಳದಲ್ಲಿ ಕೆಲಸಗಾರರ ಸುರಕ್ಷಣೆ ಮತ್ತು ಸೌಕರ್ಯಗಳಿಗೆ ಮುಖ್ಯವಾಗಿ ಗಮನ ಕೊಡಬೇಕು. ಇಲ್ಲವಾದಲ್ಲಿ ತಯಾರಿಕೆ ಕಡಮೆಯಾಗಬಹುದು. ಈ ಸ್ಥಳದಲ್ಲಾದರೋ ಕೆಲಸಗಾರರು ಯಾವ ಅಡಚಣೆ ಮತ್ತು ತೊಂದರೆ ಇಲ್ಲದೆ ಕೆಲಸಮಾಡಲು ಬೇಕಾಗುವ, ಸ್ಥಳಾವಕಾಶ, ಬೆಳಕು ಗಾಳಿ, ಮತ್ತು ಶಾಖ ಕಡಿಮೆ ಮಾಡುವ ಸೌಕರ್ಯಗಳು ಮೊದಲಾದ ನಿಯಮಗಳಿಗೆ ತಲೆಬಾಗಿ ನಕ್ಷೆ ಮತ್ತು ಕಟ್ಟಡವನ್ನು ತಯಾರಿಸಬೇಕು. ಕೆಲಸಗಾರನಿಗೆ ಬೇಕಾಗುವ ಸ್ಥಳಾವಕಾಶವನ್ನು ಯಂತ್ರಗಳು ಆಕ್ರಮಿಸಿಕೊಂಡಿರುವ ಸ್ಥಳವನ್ನು ಬಿಟ್ಟು ಗಣನೆಗೆ ತೆಗೆದುಕೊಳ್ಳಬೇಕು. ಅತಿ ಶಬ್ದ ಮಾಡುವ ಯಂತ್ರಗಳನ್ನು ಬೇರೆ ಯಂತ್ರಗಳಿಂದ ಬೇರ್ಪಡಿಸಬೇಕು. ಧೂಳು ಉತ್ಪತ್ತಿಯಾಗುವ ಸ್ಥಳದಲ್ಲಿ ನೀರಿನ ಹನಿಗಳನ್ನು ಸಿಂಪಡಿಸುವುದರಿಂದ ಧೂಳು ಹರಡುವುದಕ್ಕೆ ಅವಕಾಶವಿರುವುದಿಲ್ಲ. ಧೂಳು ಉತ್ಪತ್ತಿಯಾಗುವ ಸ್ಥಳದಲ್ಲಿ ಧೂಳನ್ನು ಹೀರುವ ಸಾಧನಗಳನ್ನು (ಹುಡ್) ಜೋಡಿಸುವುದರಿಂದ ಬಹಳ ಮಟ್ಟಿಗೆ ಕಡಮೆ ಮಾಡಬಹುದು.

ಮೂರನೆಯದಾಗಿ, ಸಿದ್ಧಪಡಿಸಿದ ವಸ್ತುಗಳನ್ನು ಜೋಡಿಸಿಟ್ಟಿರುವ ಶಾಖೆ. ಇದು ಕಚ್ಚಾಮಾಲುಗಳನ್ನು ಶೇಖರಿಸಿಡುವ ಸ್ಥಳದಂತೆ ಇದ್ದರೆ ಸಾಕು. ಆದರೆ ಬೆಂಕಿಯಿಂದ ಸಂಭವಿಸಬಹುದಾದ ತೊಂದರೆಗಳನ್ನು ನಿವಾರಿಸಲು ತಕ್ಕ ಸಾಧನಗಳಿರಬೇಕು. ಜನರು ಓಡಾಡಲು ಮತ್ತು ವಸ್ತುಗಳನ್ನು ಸಂಗ್ರಹಿಸಲು ಸಾಕಾದಷ್ಟು ಬೆಳಕಿದ್ದರೆ ಸಾಕು.

ನಾಲ್ಕನೆಯದಾಗಿ, ಶಕ್ತಿ ಕಾರ್ಯಾಲಯ (ಪವರ್ ಹೌಸ್); ಇಲ್ಲಿ ಶಾಖ ಹೆಚ್ಚು. ಆದ್ದರಿಂದ ಹೆಚ್ಚು ಗಾಳಿಯ ಸಂಚಾರ ವನ್ನು ಪಂಕಾಗಳ ಮೂಲಕ ಏರ್ಪಡಿಸಬೇಕು. ಅಲ್ಲಿ ಕೆಲವು ಸಮ ಯಗಳಲ್ಲಿ ಉಂಟಾಗುವ ಹೊಗೆಯನ್ನು ಹತೋಟಿಯಲ್ಲಿ ಇಟ್ಟು ಕೊಳ್ಳಲು ತಕ್ಕಷ್ಟು ಸಾಧನಗಳಿರಬೇಕು. ಇಲ್ಲಿ ಸಾಕಷ್ಟು ಸ್ಥಳಾ ವಕಾಶ ಕೆಲಸಗಾರನಿಗೆ ದೊರಕಿದರೂ, ಶಾಖದಿಂದಾಗಿ ದೇಹಕ್ಕೆ ಸುಖವಿರುವುದಿಲ್ಲ.

ಕಾರ್ಖಾನೆಗಳ ವಾತಾವರಣವನ್ನು ಪರಿಶೀಲಿಸಿ ಸರಿಪಡಿಸಲು ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಗೆ ಅವಕಾಶ ಮಾಡಿ ಕೊಡಬೇಕು.

ಮೇಲ್ಕಂಡ ಸೌಕರ್ಯಗಳಲ್ಲದೆ ಪ್ರತಿ ಕಾರ್ಖಾನೆಯಲ್ಲಿಯೂ, ಕೆಲಸಗಾರರ ಸಂಖ್ಯೆಗನುಗುಣವಗಿ ಸಾಕಷ್ಟು

(೧) ಕುಡಿಯುವ ತಣ್ಣನೆಯ ಶುದ್ಧವಾದ ನೀರಿನ ನಲ್ಲಿಗಳು.

(೨) ಕೊನೆಯೆ ಪಕ್ಷ ೫೦ ಕೆಲಸಗಾರರಿಗೆ ಒಂದರಂತೆಯಾ ದರೂ ಮೂತ್ರಿಗಳು ಮತ್ತು ಕಕ್ಕಸುಗಳು.

(೩) ಕೈಕಾಲು ತೊಳೆದುಕೊಳ್ಳಲು ನೀರಿನ ಕೊಳಾಯಿಗಳು.

(೪) ಶುಚಿಯಾದ ಅಚ್ಚುಕಟ್ಟಾದ ಕ್ಯಾಂಟೀನುಗಳು.

(೫) ಕೆಲಸಗಾರರ ಸಣ್ಣಮಕ್ಕಳನ್ನು ನೋಡಿಕೊಳ್ಳಲು ಕ್ರೆಷ್ ಗಳು ಮತ್ತು ಇತರ ಸೌಕರ್ಯಗಳನ್ನು ಕೆಲಸದ ರೀತಿನೀತಿಗಳನ್ನು ಅನುಸರಿಸಿ ಒದಗಿಸಬೇಕು.

ಫ್ಯಾಕ್ಟರಿ ಅಥವಾ ಕಾರ್ಖಾನೆಗಳನ್ನು ನಿರ್ಮಾಣ ಮಾಡು ವಾಗ ಜನಾರೋಗ್ಯ ಇಂಜನೀಯರ್ ಅಥವಾ ಶಿಲ್ಪಿಯ ಸಲಹೆ ಸಹಾಯಗಳನ್ನು ತೆಗೆದುಕೊಳ್ಳಬೇಕು.

## ೧೧. ಕೊನೆಯ ಮಾತು

ನಮ್ಮ ದೇಶ ಬಹಳ ಪುರಾತನವಾದುದು. ಹಿಂದೆ ಬೇರೆ ದೇಶಗಳು ನಾಗರೀಕತೆಯಲ್ಲಿ ಬಹಳ ಹಿಂದುಳಿದಿದ್ದಾಗ ನಮ್ಮ ದೇಶ ಬಹಳ ಮುಂದುವರಿದಿತ್ತು. ನಮ್ಮ ಜನರಿಗೆ ಇಹಲೋಕದ ಸೌಖ್ಯಕ್ಕಿಂತ ಪರಲೋಕದ ಸೌಖ್ಯ ಮುಖ್ಯ. ಆದುದರಿಂದ ನಮ್ಮ ದೇಶದಲ್ಲಿ ಅರಮನೆಗಳು ಮತ್ತು ದೇವಾಲಯಗಳು ಬೆಳೆದಂತೆ, ಬಡಜನರಿಗೆ ಬೇಕಾದ ಸೌಕರ್ಯಗಳು ಬೆಳೆಯಲಿಲ್ಲ. ನಮ್ಮಲ್ಲಿ ಬಡತನ, ಕಷ್ಟ, ರೋಗರುಜಿನಗಳು ನಮ್ಮ ಜನ್ಮಕ್ಕೆ ಅಂಟಿಬಂದುವೆಂದು ತಿಳಿಯುವ ಜನರು ಬಹಳ. ಆಚಾರ ವಿಚಾರಗಳನ್ನು ಅನುಸರಿಸುವ ಜನರು ಹೆಚ್ಚು; ಆದರೆ ವಿಮರ್ಶೆ ಮಾಡುವವರು ಕಡಿಮೆ. ಇದಕ್ಕೆಲ್ಲಾ ನಮ್ಮ ದೇಶದಲ್ಲಿರುವ ಬಡತನ ಮತ್ತು ಅನಕ್ಷರತೆಯೇ ಕಾರಣ. ನಮ್ಮಲ್ಲಿ ಜನರು ಒತ್ತಾಗಿ ವಾಸಿಸಲು ಇಷ್ಟಪಡುತ್ತಾರೆ. ಅವರಿಗೆ ಗಾಳಿ ಬೆಳಕುಗಳಿಂದ ಆಗುವ ಪ್ರಯೋಜನವು ತಿಳಿಯದು. ಅಲ್ಲದೆ ಸಾಂಕ್ರಾಮಿಕ ಮತ್ತು ಅಂಟು ರೋಗಗಳು ಒಬ್ಬರಿಂದೊಬ್ಬರಿಗೆ ಹೇಗೆ ಹರಡುತ್ತವೆಂಬ ಸಾಮಾನ್ಯ ಜ್ಞಾನವು ತಿಳಿಯದು ಕೆಲವರಿಗೆ; ತಿಳಿದರೂ ಅವರು ನಂಬಲು ಸಿದ್ಧರಿಲ್ಲ. ನಂಬಿದರೂ ಜನರು ಬಡವರಾದ್ದರಿಂದ ಸೌಕರ್ಯಗಳನ್ನು ಹೊಂದಲು ಸಾಧ್ಯವಿಲ್ಲ. ಮುನಿಸಿಪಾಲಿಟಿಗಳಲ್ಲಿ ಸಾಕಷ್ಟು ವರಮಾನವಿಲ್ಲದ್ದರಿಂದ ಅವರು ಕೊಳಕು ಪ್ರದೇಶಗಳನ್ನು ನಿರ್ಮೂಲ ಮಾಡಲು ಸಿದ್ಧರಿಲ್ಲ.

ನಮ್ಮಲ್ಲಿ ನೀರಿನ ಶುಚಿತ್ವವನ್ನು ಅನುಸರಿಸುವವರು ಬಹಳ ಕಡಮೆ. ನೆಲದ ಮೇಲೆ ಕೊಳೆಯಲ್ಲಿ ಬಿದ್ದಿದ್ದ ಹಗ್ಗವನ್ನು ಭಾವಿ

ಗಳಿಗೆ ಬಿಡುತ್ತಾರೆ, ಕಸಕಡ್ಡಿಗಳನ್ನು ಹಾಕುತ್ತಾರೆ. ಕೆರೆ ಮತ್ತು ಸರೋವರಗಳಲ್ಲಿ ಜನರು ಬಟ್ಟೆ ಒಗೆಯುವುದು, ಸ್ನಾನ ಮಾಡುವುದು, ಕೈಕಾಲು ಮುಖ ಮೊದಲಾದುವುಗಳನ್ನು ತೊಳೆಯುವುದು, ದನಕರು ಮುಂತಾದುವನ್ನು ತೊಳೆಯುವುದು, ಇವೇ ಮೊದಲಾದುವುಗಳಿಂದ ನೀರನ್ನು ಕೆಡಿಸುತ್ತಾರೆ. ನದಿಗಳನ್ನೂ ಸರೋವರದ ನೀರಿನಂತೆಯೇ ಕೆಡಿಸುತ್ತಾರೆ. ನದಿಗಳನ್ನು ದೇವರೆಂದೂ ಸಕಲಪಾಪಗಳನ್ನು ತೊಳೆಯುವುವೆಂದೂ ಪೂಜಿಸುತ್ತಾರೆ. ಕೆಲವರು ನದಿಗಳಲ್ಲಿ ಹೆಣಗಳನ್ನು ಬಿಟ್ಟು ಸತ್ತವರ ಆತ್ಮಕ್ಕೆ ಶಾಂತಿ ಕೋರುತ್ತಾರೆ. ಮತ್ತು ನದಿಯನ್ನು ಆರೋಗ್ಯ ನಿಯಮಗಳ ಪ್ರಕಾರ ಅಶುಚಿಗೊಳಿಸುತ್ತಾರೆ. ನೀರನ್ನು ಶೋಧಿಸುವಕಡೆಗಳಲ್ಲಿರುವ ಕೆಲಸಗಾರರಿಗೆ ತರಪೇತು ಇಲ್ಲದೇ ಇರುವುದರಿಂದ ಅವರಿಗೆ ಕುಡಿಯುವ ನೀರಿನ ಮಹತ್ವವೇ ತಿಳಿದಿರುವುದಿಲ್ಲ.

ನಮ್ಮ ಜನರು ಮಲಮೂತ್ರಗಳನ್ನಂತೂ ಸಿಕ್ಕಿದ ಕಡೆ ವಿಸರ್ಜಿಸುತ್ತಾರೆ. ಅದರಲ್ಲಿಯೂ ನಮ್ಮ ಜನ ಬೆಳಿಗ್ಗೆ ಎದ್ದು ನೀರಿರುವ ಕಡೆ ಹೋಗಿ ಮಲಮೂತ್ರಗಳನ್ನು ವಿಸರ್ಜಿಸಿ ನೀರನ್ನು ಅಪವಿತ್ರಗೊಳಿಸುತ್ತಾರೆ. ಕಸಕಡ್ಡಿಗಳನ್ನು ಸಿಕ್ಕಿದ ಕಡೆ ಬಿಸಾಡುತ್ತಾರೆ. ಇದರಿಂದಾಗಿ ಎಲ್ಲಿ ನೋಡಿದರಲ್ಲಿ ಸೊಳ್ಳೆ, ನೊಣ, ಇಲಿ ಮೊದಲಾದ ಮನುಷ್ಯನ ಅಂತ್ಯವೈರಿಗಳು ಪ್ರಬಲಿಸಲು ಸಹಕಾರವಾಗುತ್ತದೆ! ಇವು ಕಾಯಿಲೆಗಳನ್ನು ಹರಡುತ್ತವೆ.

ನಮ್ಮ ದೇಶದಲ್ಲಿ ಬಹಳ ಕಡೆ ಜನರು ಒಟ್ಟಿಗೆ ಕುಳಿತು ಒಂದೇ ತಟ್ಟೆಯಲ್ಲಿ ಊಟ ಮಾಡುವ ಪರಿಪಾಟವನ್ನು ಇಟ್ಟುಕೊಂಡಿದ್ದಾರೆ. ಇದರಿಂದ ಒಬ್ಬರಿಂದೊಬ್ಬರಿಗೆ ಪ್ರೀತಿ ಹೆಚ್ಚುವುದೆಂದು

ಹೇಳುತ್ತಾರೆ. ಆದರೆ ಅದರೊಂದಿಗೆ ಅಂಟುರೋಗಗಳೂ ಸಾ
ಸಾಂಕ್ರಾಮಿಕ ರೋಗಗಳೂ ಹರಡುತ್ತವೆಂಬುದು ತಿಳಿಯ
ಮಾರುವ ತಿಂಡಿಗಳನ್ನು ಎಷ್ಟೊ ಜನ ಕಾಯಿಲೆಯವರು ಮಾ
ತ್ತಾರೆ. ಹಸು, ಎಮ್ಮೆಗಳ ಕೊಟ್ಟಿಗೆಗಳಂತೂ ಬಹಳ ಕೊ
ಯಿಂದ ಕೂಡಿರುತ್ತವೆ. ಹಾಲನ್ನು ಕರೆಯುವ ಮತ್ತು ಶೇ
ಸುವ ವಿಧಾನವಂತೂ ಬಹಳ ಕೊಳಕು, ಕೈಗಾರಿಕಾ ಕ್ಷೇತ್ರ
ಶುಚಿತ್ವವಂತೂ ಬಹಳ ಅಸಮರ್ಪಕ; ಹೀಗಾಗಬಾರದು.

ಈ ನನ್ನ ಚಿಕ್ಕ ಕೃತಿಯಿಂದ ಜನರು ಆರೋಗ್ಯ ನಿಯ
ಗಳನ್ನು ಸ್ವಲ್ಪಮಟ್ಟಿಗಾದರೂ ತಿಳಿದುಕೊಳ್ಳುವಂತಾದರೆ ನ
ಪ್ರಯತ್ನ ಸಾರ್ಥಕವಾಯಿತೆಂದು ಭಾವಿಸುತ್ತೇನೆ.